# ಮಹಾಕಾರುಣಿಕ

# ಭಗವಾನ್ ಬುದ್ಧ

ಜಿ. ಪಿ. ರಾಜರತ್ನಂ

ಸಾವಿರದ ಐದು ನೂರನೆಯ ಬುದ್ಧ ಜಯಂತಿಯ ದಿವಸ

(೨೪-೫-೧೯೫೬)

ಪ್ರಕಟವಾಯಿತು.



ಪ್ರಕಾಶಕರು :

ಮೈಸೂರು ಸಂಸ್ಥಾನದ ವಿದ್ಯಾ ಇಲಾಖೆ, ಬೆಂಗಳೂರು.

# ಅರಿಕೆ

ಭಗವಂತನಾದ ಬುದ್ಧಗುರುವಿನ ಎರಡು ಸಾವಿರದ ಐನೂರನೆಯ ಮಹಾ ಪರಿನಿರ್ವಾಣ ಮಹೋತ್ಸವದ ಶುಭಸಂದರ್ಭದಲ್ಲಿ, ನಮ್ಮ ಶಾಲಾ ಬಾಲಕ ಬಾಲಕಿಯರುಗಳ ತಿಳಿವಳಿಕೆಗೋಸ್ಕರವಾಗಿ, ಭಗವಂತನ ಜೀವನದ ಕೆಲವು ಘಟನೆಗಳನ್ನೂ ಭಗವಂತನ ಬೋಧೆಯ ಕೆಲವು ಮಹಾ ವಾಕ್ಯಗಳನ್ನೂ ಒದಗಿಸಿ ಕೊಡುವ ಪುಣ್ಯಾವಕಾಶವನ್ನು ನನಗೆ ಕಲ್ಪಿಸಿಕೊಟ್ಟುದಕ್ಕಾಗಿ ನಮ್ಮ ವಿದ್ಯಾ ಇಲಾಖೆಯವರಿಗೆ ನನ್ನ ವಂದನೆಗಳನ್ನು ಅರ್ಪಿಸುತ್ತೇನೆ. ಈ ಪುಸ್ತಕದ ವ್ಯಾಸಂಗದಿಂದ ನಮ್ಮ ಮಕ್ಕಳ ಮನಸ್ಸು ಶುಚಿಯಾಗಲಿ, ಮಾತು ಸ್ವಚ್ಛವಾಗಲಿ, ಕೆಲಸ ಶುದ್ಧವಾಗಲಿ.

—ಜಿ. ಪಿ. ರಾಜರತ್ನಂ



ಬೆಂಗಳೂರು :
ಮೈಸೂರು ಸರ್ಕಾರದ ಮುದ್ರಣಾಲಯದ ಡೈರೆಕ್ಟರವರಿಂದ ಮುದ್ರಿಸಲ್ಪಟ್ಟಿ
1956

# ಬುದ್ಧನಿಗೆ ನಮಸ್ಕಾರ

**ನಮೋ ತಸ್ಸ ಭಗವತೋ ಅರಹತೋ ಸಮ್ಮಾಸಂಬುದ್ಧಸ್ಸ**

ಇದು ಬೌದ್ಧರು ಬುದ್ಧನಿಗೆ ನಮಸ್ಕಾರ ಎನ್ನುವಾಗ ಹೇಳುವ ಮಂತ್ರ. "ಭಗವಂತನೂ ಅರ್ಹಂತನೂ ಸಮ್ಯಕ್ ಸಂಬುದ್ಧನೂ ಆದ ಆತನಿಗೆ ನಮಸ್ಕಾರ" ಎಂದು ಈ ಮಂತ್ರಕ್ಕೆ ಅರ್ಥ.

ಈ ಭಾಷೆಯನ್ನು "**ಪಾಲಿ**" ಎಂದು ಕರೆಯುತ್ತಾರೆ. ಬುದ್ಧನು ಹೇಳಿದ ಉಪದೇಶಗಳೆಲ್ಲ ಈ ಭಾಷೆಯಲ್ಲಿ ಇವೆ. ಆ ಉಪದೇಶಗಳನ್ನು ಒಳಕೊಂಡ ಗ್ರಂಥಗಳಿಗೆ "**ಪಿಟಕ**" ಎಂದು ಹೆಸರು.

ಬೌದ್ಧರು ಯಾರನ್ನು "**ಬುದ್ಧ**" ಎಂದು ಕರೆಯುತ್ತಾರೋ ಆತನನ್ನೆ ಶೈವರು "**ಶಿವ**" ಎಂದು, ವೇದಾಂತಿಗಳು "**ಬ್ರಹ್ಮ**" ಎಂದು, ಪ್ರಮಾಣ ಪಟುಗಳಾದ ನೈಯಾಯಿಕರು "**ಕರ್ತ**" ಎಂದು, ಜೈನಶಾಸನವನ್ನು ಒಪ್ಪಿದವರು "**ಅರ್ಹನ್**" ಎಂದು, ಮೀಮಾಂಸಕರು "**ಕರ್ಮ**" ಎಂದು, ವೈಷ್ಣವರು "**ಕೇಶವ**" ಎಂದು ಉಪಾಸನೆ ಮಾಡುತ್ತಾರೆ.

ಈ ಉದಾರವಾದ ಉತ್ಕೃಷ್ಟ ಭಾವನೆಯನ್ನು ನಮ್ಮ ಕರ್ಣಾಟಕದ ಹೊಯಿಸಳ ರಾಜ್ಯದ ಬೇಲೂರಿನ ಒಂದು ಶಿಲಾಶಾಸನ ಹೀಗೆ ಘೋಷಿಸುತ್ತದೆ:—

ಯಂ ಶೈವಾಃ ಸಮುಪಾಸತೇ ಶಿವ ಇತಿ
  ಬ್ರಹ್ಮೇತಿ ವೇದಾಂತಿನೋ
ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ
  ಕರ್ತೇತಿ ನೈಯಾಯಿಕಾಃ
ಅರ್ಹಂಶ್ಚೇತಿ ಚ ಜೈನಶಾಸನಮತಾಃ
  ಕರ್ಮೇತಿ ಮೀಮಾಂಸಕಾಃ
ಸೋಽಯಂ ವೋ ವಿದಧಾತು ವಾಂಛಿತಫಲಂ
  ಶ್ರೀ ಕೇಶವೇಶಸ್ಸದಾ

ಜಗದೀಶ್ವರನಾದ ಶ್ರೀ ಕೇಶವನು ಲೋಕದಮೇಲೆ ಅನುಗ್ರಹ ಮಾಡುವುದಕ್ಕೋಸ್ಕರ ಎತ್ತಿದ ಹತ್ತು ದೊಡ್ಡ ಅವತಾರಗಳಲ್ಲಿ ಒಂಬತ್ತನೆಯ ಬುದ್ಧಾವತಾರವು ಲೋಕದ ಮೇಲೆ ತುಂಬ ಕರುಣೆಯನ್ನು ಬೀರಿತು ಎಂದು ನಮ್ಮ ಭರತ ದೇಶ ಕೊಂಡಾಡುತ್ತದೆ. ಭರತ ದೇಶದ ಭಕ್ತಕವಿಯಾದ ಜಯದೇವನು ತನ್ನ "ಗೀತ ಗೋವಿಂದ" ವೆಂಬ ಮಹಾ ಪ್ರಬಂಧದಲ್ಲಿ ಹೀಗೆ ಹೇಳುತ್ತಾನೆ:

ವೇದಾನುದ್ಧರತೇ ಜಗನ್ನಿವಹತೇ
ಭೂಗೋಲಮುದ್ಬಿಭ್ರತೇ
ದೈತ್ಯಾನ್ದಾರಯತೇ ಬಲಿಂ ಛಲಯತೇ
ಕ್ಷತ್ರಕ್ಷಯಂ ಕುರ್ವತೇ
ಪೌಲಸ್ತ್ಯಂ ಜಯತೇ ಹಲಂ ಕಲಯತೇ
ಕಾರುಣ್ಯಮಾತನ್ವತೇ
ಮ್ಲೇಚ್ಛಾನ್ಮೂರ್ಛಯತೇ ದಶಾಕೃತಿಕೃತೇ
ಕೃಷ್ಣಾಯ ತುಭ್ಯಂ ನಮಃ

ಕೃಷ್ಣನಾಗಿ ಮೈದೋರಿದ ಆತನೇ ಮೀನಾಗಿ ವೇದಗಳನ್ನು ಉದ್ಧರಿಸಿದನು, ಆಮೆಯಾಗಿ ಜಗತ್ತನ್ನು ಹೊತ್ತನು, ವರಾಹನಾಗಿ ಭೂಮಿಯನ್ನು ಮೇಲೆತ್ತಿದನು, ನರಸಿಂಹನಾಗಿ ದೈತ್ಯನನ್ನು ಸೀಳಿದನು, ವಾಮನನಾಗಿ ಬಲಿಯನ್ನು ಮೆಟ್ಟಿದನು, ಪರಶುರಾಮನಾಗಿ ಕ್ಷತ್ರಿಯರನ್ನು ಕೊಂದನು, ಬಲರಾಮನಾಗಿ ಹಲಾಯುಧವನ್ನು ಬೀಸಿದನು, **ಬುದ್ಧನಾಗಿ ಕರುಣೆಯನ್ನು ಬೀರಿದನು,** ಕಲಿಯಾಗಿ ಮ್ಲೇಚ್ಛರನ್ನು ಮೈಮರೆಸಿದನು. ಹೀಗೆ ಹತ್ತು ಅವತಾರ ತಾಳಿದ ಆತನಿಗೆ ನಮಸ್ಕಾರ.

ಹೀಗೆ ವಿಶೇಷವಾದ ಕರುಣೆಯನ್ನು ತೋರಿದ ಬುದ್ಧನು ಮಹಾಜ್ಞಾನಿಯೂ ಆಗಿದ್ದನು. "**ಅಮರ**" ವೆಂಬ ನಾಮಲಿಂಗಾನುಶಾಸನವನ್ನು ರಚಿಸಿದ ಅಮರ ಸಿಂಹನು ಹೇಳುತ್ತಾನೆ:

ಯಸ್ಯ ಜ್ಞಾನದಯಾಸಿಂಧೋಃ
ಅಗಾಧಸ್ಯ ಅನಘಾಗುಣಾಃ
ಸೇವ್ಯತಾಂ ಅಕ್ಷಯೋ ಧೀರಾಃ
ಸ ಶ್ರೀಯೇ ಚ ಅಮೃತಾಯ ಚ

ಇದಕ್ಕೆ ಅರ್ಥ ಏನೆಂದರೆ—ಬುದ್ಧನ ಜ್ಞಾನವೂ ದಯೆಯೂ ಸಮುದ್ರದಂತೆ ಅಗಾಧವಾದುದು. ಆತನ ಗುಣಗಳು ಯಾವ ಪಾಪದ ಸೋಂಕನ್ನೂ ಇಲ್ಲದುವು. ಇಹದಲ್ಲಿ ಸಂಪತ್ತು ಬೇಕು, ಪರದಲ್ಲಿ ಅಮೃತ ಬೇಕು ಎನ್ನುವ ಧೀರರು ಈ ಅಕ್ಷಯನಾದ ಬುದ್ಧನನ್ನು ಸೇವಿಸಲಿ.

ಜ್ಞಾನದಯಾಸಿಂಧುವೂ ಅಗಾಧನೂ ಅನಘನೂ ಗುಣವಂತನೂ ಅಕ್ಷಯನೂ ಆದ ಬುದ್ಧನು ಯಾರೆಂಬುದನ್ನು ಅಮರಸಿಂಹನು ಹೀಗೆ ಹೇಳುತ್ತಾನೆ :—

ಸರ್ವಜ್ಞಃ ಸುಗತೋ ಬುದ್ಧೋ ಧರ್ಮರಾಜಸ್ತಥಾಗತಃ |
ಸಮಂತಭದ್ರೋ ಭಗವಾನ್ ಮಾರಜಿಲ್ಲೋಕಜಿಜ್ಜಿನಃ ||
ಷಡಭಿಜ್ಞೋ ದಶಬಲೋಽದ್ವಯವಾದೀ ವಿನಾಯಕಃ |
ಮುನೀಂದ್ರಃ ಶ್ರೀಘನಃ ಶಾಸ್ತಾ ಮುನಿಃ ಶಾಕ್ಯಮುನಿಸ್ತು ಯಃ ||
ಸ ಶಾಕ್ಯಸಿಂಹಃ ಸರ್ವಾರ್ಥಸಿದ್ಧಃ ಶೌದ್ಧೋದನಿಶ್ಚ ಸಃ |
ಗೌತಮಶ್ಚಾರ್ಕಬಂಧುಶ್ಚ ಮಾಯಾದೇವೀಸುತಶ್ಚ ಸಃ ||

ಸರ್ವಜ್ಞ, ಸುಗತ, ಬುದ್ಧ, ಧರ್ಮರಾಜ, ತಥಾಗತ, ಸಮಂತಭದ್ರ, ಭಗವಾನ್, ಮಾರಜಿತ್, ಲೋಕಜಿತ್, ಜಿನ, ಷಡಭಿಜ್ಞ, ದಶಬಲ, ಅದ್ವಯವಾದಿ, ವಿನಾಯಕ, ಮುನೀಂದ್ರ, ಶ್ರೀಘನ, ಶಾಸ್ತಾ, ಮುನಿ, ಶಾಕ್ಯಮುನಿ—ಇವೆಲ್ಲ ಒಬ್ಬನೇ ಬುದ್ಧನ ಬೇರೆಬೇರೆ ಗುಣಗಳನ್ನು ಸೂಚಿಸುವ ಬೇರೆ ಬೇರೆ ಹೆಸರುಗಳು. ಈತನು ಶಾಕ್ಯಸಿಂಹನು, ಸರ್ವಾರ್ಥಸಿದ್ಧನು, ಶುದ್ಧೋದನನ ಮಗನು, ಗೌತಮನು, ಅರ್ಕಬಂಧುವು (ಸೂರ್ಯವಂಶದವನು), ಮಾಯಾದೇವಿಯ ಮಗನು.

## ನಮೋ ತಸ್ಸ ಭಗವತೋ ಅರಹತೋ ಸಮ್ಮಾಸಂಬುದ್ಧಸ್ಸ

ಭಗವಂತನೂ ಅರ್ಹಂತನೂ ಸಮ್ಯಕ್‌ಸಂಬುದ್ಧನೂ
ಆದ ಆತನಿಗೆ ನಮಸ್ಕಾರ.

## ಎರಡು ಸಾವಿರದ ಐದುನೂರನೆಯ ಬುದ್ಧಜಯಂತಿ

ಸೆ ಸಾವಿರದ ಒಂಭೈನೂರ ಐವತ್ತಾರನೆಯ ಮೇ ತಿಂಗಳಿನ ಇಪ್ಪತ್ತ ನಾಲ್ಕನೆಯ ತಾರೀಖು **ವೈಶಾಖ ಶುಕ್ಲ ಪೂರ್ಣಿಮಾ**, ಆ ದಿವಸ **ಬುದ್ಧ ಜಯಂತಿ.** ಈ ವರ್ಷದ ಬುದ್ಧಜಯಂತಿ **ಎರಡು ಸಾವಿರದ ಐದು ನೂರನೆಯ ಬುದ್ಧಜಯಂತಿ.**

ನಮ್ಮ ದೇಶದಲ್ಲಿ ಹಿಂದೆ ವಿಕ್ರಮ ಶಕ, ಶಾಲೀವಾಹನ ಶಕ ಎಂಬುದಾಗಿ ಒಂದು ಮಹಾ ಪ್ರಸಿದ್ಧವಾದ ಘಟನೆಯ ದಿವಸದಿಂದ ಕಾಲವನ್ನು ಗಣನೆ ಮಾಡುತ್ತಿದ್ದರು. ಪಾಶ್ಚಾತ್ಯರ ಸಂಪರ್ಕವಾದ ಮೇಲೆ, ಅದನ್ನೆಲ್ಲ ಬಿಟ್ಟು, ಅವರಂತೆಯೇ ಯೇಸುಕ್ರಿಸ್ತನ ಜನನ ಕಾಲದಿಂದ ಕಾಲಗಣನೆ ಮಾಡುತ್ತಿದ್ದೇವೆ. ಆದರೆ, ಸಿಂಹಳದೇಶದಲ್ಲಿ, ಭಗವಂತನಾದ ಗೌತಮ ಬುದ್ಧ ಗುರುವು ತಾನು ಪರಿನಿರ್ವಾಣ ಪಡೆದ ದಿವಸದಿಂದ ತೊಡಗಿ ಕಾಲಗಣನೆ ಮಾಡುತ್ತಾರೆ. ಸಿಂಹಳ ದವರ ಕಾಲಗಣನೆಯ ಪ್ರಕಾರ, ಪಾಶ್ಚಾತ್ಯರು ಯಾವುದನ್ನು ಕ್ರಿಸ್ತಾಬ್ದ 1956 ಎನ್ನುವರೋ ಅದೇ ಬುದ್ಧಾಬ್ದ 2500 ಆಗುತ್ತದೆ. ಸಿಂಹಳದ ಸಂಪ್ರದಾಯದ ಪ್ರಕಾರ, ಕ್ರಿಸ್ತನ ಜನನಕ್ಕೆ 544 ವರ್ಷಗಳ ಹಿಂದೆ ಭಗವಂತನಾದ ಬುದ್ಧನ ಪರಿನಿರ್ವಾಣವು ನಡೆಯಿತು. ಅದರಂತೆ ಆಗಿನಿಂದ ನಡೆದಿರುವ ಬುದ್ಧಜಯಂತಿಗಳ ಕೂಟದಲ್ಲಿ **ಈ ವರ್ಷ ನಡೆಯುವ ಬುದ್ಧಜಯಂತಿಯು (೫೪೪+೧೯೫೬=೨೫೦೦) ಎರಡು ಸಾವಿರದ ಐದುನೂರನೆಯ ಬುದ್ಧ ಜಯಂತಿಯಾಗುತ್ತದೆ.**

ವೈಶಾಖ ಶುಕ್ಲ ಪೂರ್ಣಿಮಾ ಎಂಬುದು ಭಗವಂತನು ಪರಿನಿರ್ವಾಣ ಪಡೆದ ಪುಣ್ಯದಿವಸವೆಂದು ಪವಿತ್ರವಾಗಿರುವುದರ ಜೊತೆಗೆ—ಭಗವಂತನು ಜನಿಸಿದುದೂ ವೈಶಾಖ ಶುಕ್ಲ ಪೂರ್ಣಿಮಾ ದಿವಸವೆ, ಭಗವಂತನಿಗೆ ಬೋಧಿ ಎಂಬ ಲೋಕೋತ್ತರ ಜ್ಞಾನ ಲಾಭವಾದುದೂ ವೈಶಾಖ ಶುಕ್ಲ ಪೂರ್ಣಿಮಾ ದಿವಸವೆ ಎಂಬ—ಇನ್ನೂ ಎರಡು ಕಾರಣಗಳಿಂದ ಈ ವೈಶಾಖ ಶುಕ್ಲ ಪೂರ್ಣಿಮಾ ಮೂರು ಪಟ್ಟು ಪವಿತ್ರವಾಗಿದೆ, ಮೂರು ಪಟ್ಟು ಪ್ರಸಿದ್ಧವಾಗಿದೆ.

ಪರಿನಿರ್ವಾಣ ಹೊಂದುವ ಕಾಲಕ್ಕೆ ಭಗವಂತನಿಗೆ ಸುಮಾರು ಎಂಬತ್ತು ವರ್ಷ ವಯಸ್ಸಾಗಿತ್ತು. ಈ ಎಂಬತ್ತು ವರ್ಷಗಳಲ್ಲಿ ಇಪ್ಪತ್ತೊಂಬತ್ತು ವರ್ಷಗಳು ಆತನು ಗೃಹಸ್ಥನಾಗಿ, ಸುಖಸಂತೋಷಗಳನ್ನು ಅನುಭವಿಸಿದನು; ಅನಂತರದ ಆರು ವರ್ಷಗಳು ಸತ್ಯವನ್ನು ಹುಡುಕಿಕೊಂಡು ಅನೇಕ ರೀತಿಯ ತಪಸ್ಸು ಮಾಡಿದನು; ಅಲ್ಲಿಂದ ಮುಂದಿನ ನಲವತ್ತೈದು ವರ್ಷಗಳು—ತಾನು ಕಂಡ ಅಮೃತದ ಮಾರ್ಗವನ್ನು ಲೋಕದಲ್ಲಿ ಪ್ರಚಾರ ಮಾಡುತ್ತ, ಕಡೆಗೆ ತನ್ನ ಎಂಬತ್ತನೆಯ ವಯಸ್ಸಿನಲ್ಲಿ ದೇಹವನ್ನು ಬಿಟ್ಟು, ಇಹಜೀವನವನ್ನು ಮುಗಿಸಿ, ಪರಿನಿರ್ವಾಣಕ್ಕೆ ಸಂದನು.

ಭಗವಂತನ ಜೀವನದ ಮುಖ್ಯ ಘಟನೆಗಳನ್ನು ಹೀಗೆ ಜ್ಞಾಪಕ ಇಟ್ಟುಕೊಳ್ಳಬಹುದು :—

**ಭಗವಂತನ ಜನನ—**

**ವೈಶಾಖ ಶುಕ್ಲ ಪೂರ್ಣಿಮಾ (ಕ್ರಿಸ್ತಪೂರ್ವ ೬೨೪)**

ಭಗವಂತನ ಗೃಹತ್ಯಾಗ—

ಆಷಾಢ ಶುಕ್ಲ ಪೂರ್ಣಿಮಾ (ಕ್ರಿಸ್ತಪೂರ್ವ ೫೯೫)

**ಭಗವಂತನ ಬೋಧಿಲಾಭ—**

**ವೈಶಾಖ ಶುಕ್ಲ ಪೂರ್ಣಿಮಾ (ಕ್ರಿಸ್ತಪೂರ್ವ ೫೮೯)**

ಭಗವಂತನ ಧರ್ಮಚಕ್ರಪ್ರವರ್ತನ—

ಆಷಾಢ ಶುಕ್ಲ ಪೂರ್ಣಿಮಾ (ಕ್ರಿಸ್ತಪೂರ್ವ ೫೮೯)

**ಭಗವಂತನ ಪರಿನಿರ್ವಾಣ—**

**ವೈಶಾಖ ಶುಕ್ಲ ಪೂರ್ಣಿಮಾ (ಕ್ರಿಸ್ತಪೂರ್ವ ೫೪೪)**

ಭಗವಂತನ ವಿಶೇಷಗುಣವಾದ ಆತನ ಮಹಾಕರುಣೆ ಆತನ ದಿವ್ಯ ಜೀವನದಲ್ಲಿ ಹೇಗೆ ಕಂಡುಬಂದಿದೆ ಎಂಬುದನ್ನೂ ಆತನ ಬೋಧೆಯೊಳಗಿನ ಕೆಲವು ಧರ್ಮವಚನಗಳನ್ನೂ ಮುಂದೆ ಕೊಟ್ಟಿದೆ. ಓದು ಬಲ್ಲವರು ತಾವು ಇದನ್ನು ಓದಿಕೊಂಡು, ಓದಲಾರದವರಿಗೆ ಇದನ್ನು ಓದಿ ತಿಳಿಸಬೇಕೆಂದು ವಿನಯಪೂರ್ವಕವಾದ ಪ್ರಾರ್ಥನೆ.

# ವಿವರ

# ಮಹಾಕಾರುಣಿಕ ಭಗವಾನ್ ಬುದ್ಧ

## ೧. ಭಗವಂತನ ಬಾಲ್ಯಕಾಲದ ಕರುಣೆ

ಸಿದ್ಧಾರ್ಥ ಕುಮಾರನು ತನ್ನ ಬಾಲ್ಯಕಾಲದಲ್ಲಿ ಎಲ್ಲರ ಹಾಗೆ ಆಟಪಾಟಗಳಲ್ಲಿ ಮುಳುಗಿರದೆ ಸದಾ ಏನೋ ಚಿಂತಿಸುತ್ತಿದ್ದನು. ಅನೇಕ ವೇಳೆ ಒಬ್ಬನೇ ಕುಳಿತುಕೊಂಡು ಏನೋ ಯೋಚಿಸುತ್ತ ತನ್ನನ್ನೇ ತಾನು ಮರೆತುಬಿಡುತ್ತಿದ್ದನು. ಆತನು ಬೆಳೆದ ಹಾಗೆಲ್ಲ ಈ ಸ್ವಭಾವವೂ ಜೊತೆಗೆ ಬೆಳೆಯುತ್ತಿತ್ತು. ಇದರ ಜೊತೆಗೆ ಆತನಿಗೆ ವಯಸ್ಸು ಹೆಚ್ಚಿದ ಹಾಗೆಲ್ಲ ಪ್ರಾಣಿಗಳ ಮೇಲಿನ ದಯೆ ಕೂಡ ಹೆಚ್ಚುತ್ತಿತ್ತು. ಅನೇಕ ವೇಳೆ ಬೇಟೆಗೆ ಹೋಗಿ, ಕೈಗೆ ಸಿಕ್ಕಿದ ಜಿಂಕೆಗಳನ್ನು ಕನಿಕರದಿಂದ ಬಿಟ್ಟುಬಿಡುತ್ತಿದ್ದನು. ಒಂದೊಂದು ಸಲ, ಜೊತೆಗಾರರೊಡನೆ ಕುದುರೆ ಸವಾರಿ ಮಾಡುತ್ತ, ಕುದುರೆಗೆ ಓಡಿ ಆಯಾಸವಾಯಿತೆಂದು ಕಂಡು ಬಂದರೆ, ತಾನು ಹಿಂದೆ ಬೀಳುವುದನ್ನೂ ಲಕ್ಷಿಸದೆ ಕುದುರೆಯನ್ನು ನಿಲ್ಲಿಸಿಬಿಡುತ್ತಿದ್ದನು. ಹೀಗೆ ಆತನ ಪ್ರಾಣಿದಯೆ ಬೆಳೆಯುತ್ತಿದ್ದರೂ, ದುಃಖ ನೋವುಗಳ ಅನುಭವ ಇನ್ನೂ ಉಂಟಾಗಿರಲಿಲ್ಲ.

ಒಂದು ಸಲ ಕುಮಾರನು ತೋಟದಲ್ಲಿ ಕುಳಿತಿದ್ದನು. ನೆತ್ತಿಯ ಮೇಲೆ ಹಾಲುಬಿಳುಪಿನ ಚೆಲುವಾದ ಒಂದು ಹಂಸ ಹಾರುತ್ತಿತ್ತು. ಅದು ಚಕ್ರಾಕಾರವಾಗಿ ಸುತ್ತುವ ಹಾರುವ ಸೊಬಗನ್ನು ನೋಡುತ್ತ, ಸಿದ್ಧಾರ್ಥನು ಬಿಟ್ಟ ಕಣ್ಣು ಬಿಟ್ಟಂತೆ ಕುಳಿತಿದ್ದನು. ಕೊಂಚ ದೂರದಲ್ಲಿಯೇ ಹೋಗುತ್ತಿದ್ದ ಸಿದ್ಧಾರ್ಥನ ದಾಯಾದಿಯಾದ ದೇವದತ್ತನು ಕೂಡ ಆ ಹಂಸವನ್ನು ಕಂಡನು. ಅವನು ಕುಮಾರನಂತೆ ದಯಾವಂತನಾಗಿರಲಿಲ್ಲ. ಕೈಯಲ್ಲಿದ್ದ ಬಿಲ್ಲಿಗೆ ಬಾಣ ಹೂಡಿ ಬಿಟ್ಟನು. ಹಂಸಕ್ಕೆ ಬಾಣ ತಗುಲಿ, ಅದು ಹಾರಲಾರದೆ ಹಾಗೆಯೇ ಕೆಳಗುರುಳುತ್ತ ಸಿದ್ಧಾರ್ಥನ ಕಾಲ ಬಳಿ ಬಿತ್ತು. ಕುಮಾರನಿಗೆ ಅದರ ಸಂಕಟ ಕಂಡು ಅಯ್ಯೋ ಎನ್ನಿಸಿತು. ಅದಕ್ಕೆ ನೋವಾಗದಂತೆ ಆ ಬಾಣವನ್ನು ಮೆಲ್ಲಗೆ ತೆಗೆದು, ಗಾಯವನ್ನು ತೊಳೆದು, ಅದಕ್ಕೆ ಆರೈಕೆ ಮಾಡಿದನು. ತಾನು ಹೊಡೆದ ಹಕ್ಕಿ ಸಿದ್ಧಾರ್ಥನ ಹತ್ತಿರ ಇರುವುದೆಂದು ದೇವದತ್ತನಿಗೆ ತಿಳಿಯಿತು. ಅವನು

ಸಿದ್ಧಾರ್ಥನ ಬಳಿ ಬಂದು, "ಅದು ನಾನು ಹೊಡೆದ ಹಕ್ಕಿ. ಅದು ನನ್ನದು. ಕೊಡು" ಎಂದನು. ಸಿದ್ಧಾರ್ಥನು ಮೃದುವಾಗಿ ನಗುತ್ತ, "ಹಕ್ಕಿಯನ್ನು ಹೊಡೆದವನು ನೀನು, ನಿಜ. ಆದರೆ ಹಕ್ಕಿಯನ್ನು ಉಳಿಸಿದವನು ನಾನು. ಆದುದರಿಂದ ಅದು ನನ್ನದು. ಯಾರು ಬೇಕಾದರೂ ಕೊಲ್ಲಬಲ್ಲರು, ಆದರೆ ಎಲ್ಲರೂ ಬದುಕಿಸಲಾರರು" ಎಂದು ಹೇಳುತ್ತ ಹಂಸವನ್ನು ಬಿಟ್ಟನು. ಆ ಹಂಸ ಸಂತೋಷದಿಂದ ಹಾರಿಹೋಯಿತು.

ಹೀಗೆ ಚಿಕ್ಕಂದಿನಲ್ಲಿ ಹಂಸಕ್ಕೆ ತೋರಿಸಿದ ಕರುಣೆಯನ್ನೇ ಆತನು ತನ್ನ ಕಡೆಗಾಲದ ವರೆಗೆ ಎಲ್ಲ ಜೀವಿಗಳಿಗೂ ತೋರಿಸುತ್ತಿದ್ದನು. ಆದುದರಿಂದಲೇ ಆತನನ್ನು 'ಮಹಾ ಕಾರುಣಿಕ' ಎಂದು ಕರೆಯುವುದು.

## ೨. ಸಿದ್ಧಾರ್ಥನ ಜೀವದಯೆ

ಒಂದು ಸಲ ಸುಗ್ಗಿಯ ಹಬ್ಬ ಬಂತು. ದೊರೆ ಹಬ್ಬಕ್ಕೆ ಮಗನನ್ನು ಕರೆದುಕೊಂಡು ಹೋದನು. ದಾರಿಯಲ್ಲಿ ರೈತರೆಲ್ಲ ನಗುನಗುತ್ತ ಹೋಗುತ್ತಿದ್ದರು. ಹಕ್ಕಿಗಳು, ಚಿಟ್ಟೆಗಳು, ದುಂಬಿಗಳು ಎಲ್ಲವೂ ಹಾಯಾಗಿ ಹಾರಾಡುತ್ತಿದ್ದವು. ಅಳಿಲು ನೆಗೆದು ಓಡುತ್ತಿತ್ತು, ನವಿಲು ಗರಿ ಬಿಚ್ಚಿ ಕುಣಿಯುತ್ತಿತ್ತು. ನೀರಿನಲ್ಲಿ ಮೀನು ಮಿನುಗುತ್ತ ಓಡಾಡುತ್ತಿತ್ತು. ಎಲ್ಲೆಲ್ಲಿಯೂ ಸುಗ್ಗಿಯ ಸಂಪತ್ತು ತುಂಬಿ ತುಳುಕಾಡುತ್ತಿತ್ತು. ಅದನ್ನು ಕಂಡು ಸಿದ್ಧಾರ್ಥ ಕುಮಾರನು ಹಿಗ್ಗಿದನು. ಆದರೆ ಪುನಃ ಕಣ್ಣಿಟ್ಟು ನೋಡಿದನು. ಅವನು ಕಂಡುದೇನು! ಉಳುವ ಒಕ್ಕಲಿಗನು ಒಂದು ಗುಟುಕು ಗಂಜಿಗಾಗಿ ಬೆವರು ಹರಿಸಿ ದುಡಿಯುತ್ತಿದ್ದನು. ಎತ್ತುಗಳು ಉರಿಬಿಸಿಲಿನಲ್ಲಿಯೂ ಮೈಮುರಿಯ ಕೆಲಸಮಾಡುತ್ತಿದ್ದವು. ಹಲ್ಲಿ ನೊಣವನ್ನು ತಿನ್ನುತ್ತಿತ್ತು; ಹಾವು ಹಲ್ಲಿಯನ್ನು ನುಂಗುತ್ತಿತ್ತು; ಗಿಡಗ ಎರಡನ್ನೂ ಬಡಿಯುತ್ತಿತ್ತು. ಗುಬ್ಬಿ ಚಿಟ್ಟೆಯನ್ನು ಹಿಡಿಯುತ್ತಿತ್ತು; ಗುಬ್ಬಿಯನ್ನು ಡೇಗೆ ಹಿಡಿಯುತ್ತಿತ್ತು; ಒಂದನ್ನು ಬಡಿದು ಒಂದು ಬದುಕುತ್ತಿತ್ತು. ಬದುಕುವ ಹೋರಾಟದಲ್ಲಿ ಒಂದನ್ನು ಇನ್ನೊಂದು ಬಡಿದು ಬಾಯಿಗೆ ಹಾಕಿಕೊಳ್ಳುತ್ತಿತ್ತು. ಹುಳುವಿನಿಂದ ಮನುಷ್ಯನ ವರೆಗೆ ಒಂದಕ್ಕಾದರೂ ಉಳಿಗಾಲವಿರಲಿಲ್ಲ.

ಸಿದ್ಧಾರ್ಥನು ಆ ಬದುಕನ್ನು ನೋಡಿದನು. ಸಂಕಟಪಟ್ಟನು. "ಇದು ಎಂತಹ ಲೋಕ! ಆಳಿನ ಬಾಳು ಎಷ್ಟು ಕಷ್ಟ! ಎತ್ತಿನ ದುಡಿತ ವಿಷ್ಟು ಕಠಿನ! ಚಿಕ್ಕದನ್ನು ದೊಡ್ಡದು ಹೇಗೆ ಹಾಳುಮಾಡುತ್ತಿದೆ! ನೀರಿನಲ್ಲಿರುವ ಮೀನುಗಳಿಗೆ ಕೂಡ ಉಳಿಗಾಲವಿಲ್ಲವಲ್ಲ!" ಎಂದು ನಿಟ್ಟುಸಿರು ಬಿಟ್ಟನು.

ಅದನ್ನೇ ಕುರಿತು ಚಿಂತಿಸುತ್ತ, ಕುಮಾರನು ಒಂದು ಅಶ್ವತ್ಥಮರದ ಕೆಳಗಡೆ ಕುಳಿತುಕೊಂಡನು. ಜಗದ ಜೀವಿಗಳನ್ನು ಕಂಡು ಆತನಿಗೆ ಮರುಕ ವುಂಟಾಯಿತು, ಕರುಣೆ ಹುಟ್ಟಿತು, ದಯೆ ಬಂತು. 'ಪ್ರಪಂಚದ ದುಃಖವನ್ನು ಹೇಗೆ ಹೋಗಲಾಡಿಸುವುದು?' ಎಂಬುದನ್ನು ಕುರಿತು ಧ್ಯಾನಿಸುತ್ತ ಕುಳಿತು ಕೊಂಡನು. ಎಷ್ಟು ಹೊತ್ತಾದರೂ ಕುಮಾರನು ಏಳಲಿಲ್ಲ. ಸೂರ್ಯನು ಉರುಳಿದ ಹಾಗೆಲ್ಲ ಮರಗಳ ನೆರಳೂ ಜಾರುತ್ತಿತ್ತು. ಆದರೆ ಕುಮಾರನು ಕುಳಿತಿದ್ದ ಅಶ್ವತ್ಥದ ನೆರಳು ಮಾತ್ರ ಕದಲದೆ ಹಾಗೆಯೇ ನಿಂತಿತ್ತು; ಕುಮಾರನ ಮೇಲೆ ಬಿಸಿಲನ್ನು ಬೀಳಗೊಡಿಸದೆ ನಿಂತಲ್ಲೆ ನಿಂತಿತ್ತು.

ಶುದ್ಧೋದನನೂ ಆತನ ಪರಿವಾರವೂ ಬಂದು ಆ ಆಶ್ಚರ್ಯವನ್ನು ಕಂಡರು. ಅರಸನಿಗೆ ಮಗನ ವಿಚಾರದಲ್ಲಿ ಗೌರವ ಹುಟ್ಟಿತು. ಆತನು ಮಗನಿಗೆ ಕೈಜೋಡಿಸಿ ನಮಸ್ಕಾರ ಮಾಡಿದನು.

## ೩. ಗೌತಮನ ಜೀವಕಾರುಣ್ಯ

ಗೌತಮನು ಬಂದು ರಾಜಗೃಹದಲ್ಲಿ ಭಿಕ್ಷೆಯೆತ್ತುವುದು ರಾಜನಾದ ಬಿಂಬಿ ಸಾರನ ದೃಷ್ಟಿಗೆ ಬಿತ್ತು. ಗೌತಮನ ಗಂಭೀರಾಕೃತಿ ಆತನಿಗೆ ಮೆಚ್ಚಾಯಿತು. ಗೌತಮನಲ್ಲಿ ಆತನಿಗೆ ಗೌರವ ಹುಟ್ಟಿತು. ಆತನನ್ನು ಕಂಡು ಮಾತನಾಡಿಸ ಬೇಕೆಂದು ಬಿಂಬಿಸಾರನು ತನ್ನ ಪರಿವಾರದೊಡನೆ ಗೌತಮನು ಇದ್ದ ಕಡೆಗೆ ಹೋದನು. ಗೌತಮನ ಮಾತುಕತೆಗಳಿಗೂ ಸೌಜನ್ಯ ಸೌಶೀಲ್ಯಗಳಿಗೂ ಬಿಂಬಿಸಾರನು ಮನಸೋತು, "ಆರ್ಯ! ನನ್ನ ಎಲ್ಲ ಸಂಪತ್ತನ್ನೂ ನಿನಗೆ ಧಾರೆ ಯೆರೆದುಕೊಡುತ್ತೇನೆ. ನೀನು ಇಲ್ಲಿಯೇ ಇದ್ದು ಬಿಡು" ಎಂದು ಬೇಡಿಕೊಂಡನು. ಅದಕ್ಕೆ ಗೌತಮನು "ರಾಜ! ನಾನು ರಾಜಕುಮಾರನಾಗಿದ್ದವನು. ನನ್ನ ತಂದೆ ಶಾಕ್ಯರ ಅರಸನಾದ ಶುದ್ಧೋದನ. ನನಗೆ ಈ ಲೋಕದ ಐಶ್ವರ್ಯ ಬೇಕಾಗಿಲ್ಲ.

ಅದರಿಂದ ಶಾಂತಿ ಸಿಕ್ಕುವುದಿಲ್ಲ. ದುಃಖವನ್ನು ಅದು ನೀಗಲಾರದು. ಅದಕ್ಕಾಗಿ ನಾನು ಆ ರಾಜಭೋಗಗಳನ್ನು ಬಿಟ್ಟು, ಉತ್ಕೃಷ್ಟ ಜ್ಞಾನವಾದ ಬೋಧಿಯನ್ನು ಹುಡುಕುತ್ತ ಬಂದಿದ್ದೇನೆ. ನೀನು ನನಗಾಗಿ ಮರುಗಬೇಡ. ಜಗತ್ತಿನ ಸುಖ ಸಂಪತ್ತುಗಳಲ್ಲಿ ಆಸೆಯುಳ್ಳವರನ್ನು ಕಂಡು ಮರುಗು" ಎಂದನು. ಗೌತಮನು ನನ್ನು ನಿಲ್ಲಿಸಿಕೊಳ್ಳಬೇಕೆಂದು ಬಿಂಬಿಸಾರನು ಎಷ್ಟೆಷ್ಟೋ ಪ್ರಯತ್ನಮಾಡಿದನು. ಆದರೆ ಗೌತಮನ ಮನಸ್ಸು ಬದಲಾಗಲಿಲ್ಲ. ಕಡೆಗೆ "ನೀನು ಬುದ್ಧನಾದ ಮೇಲೆ ಬಂದು ಮೊದಲು ನನಗೆ ಉಪದೇಶಮಾಡಬೇಕು" ಎಂದು ಬಿಂಬಿಸಾರನು ಪ್ರಾರ್ಥಿಸಿದನು. ಸಿದ್ಧಾರ್ಥನು ಅದಕ್ಕೆ ಒಪ್ಪಿ ಮುಂದೆ ನಡೆದನು.

ರಾಜಗೃಹದ ಸುತ್ತ ಐದು ಬೆಟ್ಟಗಳು. ಅವುಗಳಲ್ಲಿ ಗೃಧ್ರಕೂಟವೆಂಬುದು ಒಂದು ಬೆಟ್ಟದ ತುದಿ. ಗೃಧ್ರಕೂಟದಲ್ಲಿ ಅನೇಕ ಋಷಿಗಳೂ ಸಂನ್ಯಾಸಿಗಳೂ ತಪಸ್ಸುಮಾಡುತ್ತಿದ್ದರು. ಗೌತಮನು ಕೂಡ ಅಲ್ಲಿಯ ಒಂದು ಗುಹೆಯಲ್ಲಿ ವಾಸಮಾಡತೊಡಗಿದನು. ಹತ್ತಿರ ಇದ್ದ ರಾಜಗೃಹದಲ್ಲಿ ಭಿಕ್ಷೆ ಎತ್ತುವುದು, ಸದ್ದಿಲ್ಲದ ಗೃಧ್ರಕೂಟದ ಗುಹೆಯಲ್ಲಿ ಧ್ಯಾನಮಾಡುವುದು—ಇದು ಕೆಲವು ಕಾಲ ಗೌತಮನ ಕೆಲಸವಾಗಿತ್ತು.

ಒಂದು ಮಧ್ಯಾಹ್ನ ಗೌತಮನು ಭಿಕ್ಷೆಯಿಂದ ಬರುತ್ತಿದ್ದನು. ದಾರಿಯಲ್ಲಿ ಉರಿ ಬಿಸಿಲಿನಲ್ಲಿ, ಒಂದು ಕುರಿಯ ಮಂದೆ ಎದುರಿಗೆ ಬಂತು. ಗೌತಮನಿಗೆ ಆ ಮಂದೆಯನ್ನು ಕಂಡು ಮರುಕ ಹುಟ್ಟಿತು. "ತಂಪುವೇಳೆಯಲ್ಲಿ ಮಂದೆ ಅಟ್ಟುವುದು ಬಿಟ್ಟು, ಈ ಉರಿ ಬಿಸಿಲಿನಲ್ಲಿ ಹೀಗೆ ಓಡಿಸುವುದುಂಟೆ?" ಎಂದು ಆ ಕುರುಬನನ್ನು ಕೇಳಿದನು. ಕುರುಬನು "ಸ್ವಾಮಿ! ಈ ದಿನ ಬಿಂಬಿಸಾರ ಮಹಾರಾಜರು ದೊಡ್ಡ ಯಜ್ಞ ನಡಸುತ್ತಾರೆ. ಕುರಿಮೇಕೆಗಳನ್ನು ಅಟ್ಟದಿದ್ದರೆ ಹೇಗೆ ಆದೀತು!" ಎಂದನು. ಗೌತಮನಿಗೆ ಕರುಳು ಕಿತ್ತ ಹಾಗಾಯಿತು. "ಈ ಅರಿಯದ ಮೂಗುಜೀವಿಗಳನ್ನು ಕೊಲ್ಲುವವರೂ ಉಂಟೆ! ನಡೆ! ನಿನ್ನ ಅರಸನ ಬಳಿಗೆ ನಾನೂ ಬರುತ್ತೇನೆ. ನನ್ನ ಜೀವ ತೆಗೆದುಕೊಂಡು ಈ ಕುರಿಯನ್ನು ಬಿಟ್ಟರೂ ಬಿಟ್ಟಾನು" ಎಂದು ಆ ಮಂದೆಯೊಡನೆ ನಡೆದನು. ಮಂದೆಯಲ್ಲಿ ಒಂದು ಮರಿಗೆ ಕಾಲು ಮುರಿದು ರಕ್ತ ಬಸಿಯುತ್ತಿತ್ತು. ಅದು ನಡೆಯಲಾರದೆ ನಡೆಯುತ್ತಿತ್ತು. ಗೌತಮನು ಬುದ್ಧನಾಗತಕ್ಕವನು. ಆತನು ಸರ್ವಜೀವದಯಾಪಾರಿ. ತಾಯಿ ತನ್ನ ಮಗುವನ್ನು ಎತ್ತಿಕೊಳ್ಳುವಂತೆ

 

ಆ ಮರಿಯನ್ನು ತೋಳುಗಳಲ್ಲಿ ಎತ್ತಿ ಎದೆಗೆ ಒತ್ತಿಕೊಂಡು, ಅದರ ತಲೆಯನ್ನು ನೇವರಿಸುತ್ತ, ಅದನ್ನು ಮೃದುವಾಗಿ ಮಾತನಾಡಿಸುತ್ತ ರಾಜಗೃಹಕ್ಕೆ ಹೊರಟನು.

ಇತ್ತ, ಗೌತಮನೂ ಆ ಕುರುಬನೂ ಮಂದೆಯನ್ನು ಮುಂದೆ ಬಿಟ್ಟು ಕೊಂಡು ನಡೆದರು. ಸಂಜೆ, ಹೊತ್ತು ಮುಳುಗುವ ವೇಳೆಗೆ, ಇಬ್ಬರೂ ಯಜ್ಞಮಂಟಪಕ್ಕೆ ಬಂದರು. ಗೌತಮನು ಇನ್ನೂ ಕುರಿಮರಿಯನ್ನು ಎತ್ತಿ ಕೊಂಡಿದ್ದನು. ಗೌತಮನ ರೂಪು ವರ್ಚಸ್ಸುಗಳನ್ನು ಕಂಡು ಜನರೆಲ್ಲರೂ ಆಶ್ಚರ್ಯಗೊಂಡು ಕಲ್ಲುಬೊಂಬೆಗಳ ಹಾಗೆ ನಿಂತುಬಿಟ್ಟರು. ಗೌತಮನು ಮುಂದೆ ನಡೆಯುತ್ತ "ಕುರುಬನಿಲ್ಲದ ಕುರಿಗಳಹಾಗೆ ಈ ಜನರು ನಿಂತಿರುವರಲ್ಲ! ಇವರಿಗೆ ದಾರಿ ತೋರಿಸಿ ನಡಸುವವರು ಇಲ್ಲವಲ್ಲ!" ಎಂದು ದುಃಖಪಟ್ಟನು. ಆತನು ಬರುವ ವೇಳೆಗೆ ಅರಸನೂ ಪೂಜಾರಿಗಳೂ ಯಜ್ಞಕ್ಕೆ ಸಿದ್ಧಮಾಡಿಕೊಂಡಿದ್ದರು. ಬಲಿಪೀಠದ ಮುಂದೆ ಒಂದು ಕುರಿ ನಿಂತಿತ್ತು. ಅದರ ಬಳಿ ಒಬ್ಬ ಪೂಜಾರಿ ನಿಂತು "ಈ ಕುರಿಯನ್ನು ನಿಮಗೆ ಅರ್ಪಿಸುತ್ತೇವೆ. ಮಹಾರಾಜನ ಪಾಪಗಳನ್ನು ಈ ಕುರಿಯ ಮೇಲೆ ಹೊರಿಸುತ್ತೇವೆ. ಈ ಕುರಿಯನ್ನು ಕೊಂಡು, ನೀವು ಮಹಾರಾಜನ ಪಾಪಗಳನ್ನು ಮನ್ನಿಸಬೇಕು" ಎಂದು ದೇವರುಗಳಿಗೆ ಪ್ರಾರ್ಥನೆ ಮಾಡಿದನು. ಪ್ರಾರ್ಥಿಸಿ, ಕುರಿಯನ್ನು ಕಡಿಯಲು ಕತ್ತಿಯನ್ನು ಮೇಲೆತ್ತಿದನು.

ಆಗ ಗೌತಮನು ನಡುವೆ ಬಂದು ಅವನ ಕೈ ತಡೆದು, ದೊರೆಯನ್ನೂ ಜನರನ್ನೂ ಒಂದುಸಲ ಕನಿಕರದಿಂದ ನೋಡಿದನು. "ಈ ಪ್ರಾಣಿವಧೆ ಸರಿಯಲ್ಲ. ಜೀವ ಕೊಡುವ ಶಕ್ತಿ ನಿಮಗಿಲ್ಲ. ಆದ್ದರಿಂದ ಜೀವ ತೆಗೆಯಬಾರದು. ನಮಗೆ ಹೇಗೆ ಜೀವದ ಮೇಲೆ ಆಸೆಯುಂಟೋ ಅವುಗಳಿಗೂ ಹಾಗೆಯೇ ಉಂಟು. ದೇವರುಗಳು ನಮ್ಮನ್ನು ಕಾಪಾಡಬೇಕೆಂದು ನಾವು ಹೇಗೆ ಬಯಸುವೆವೋ ಹಾಗೆಯೇ ಅವುಗಳನ್ನೂ ನಾವು ಕಾಪಾಡಬೇಕಾದುದು ನಮ್ಮ ಧರ್ಮ. ನಮ್ಮ ಮೇಲೆ ದೇವರ ದಯೆ ಇರಲೆಂದು ನಾವು ಬೇಡುತ್ತೇವೆ. ಹಾಗೆಯೇ ನಮ್ಮ ದಯೆ ಈ ಮೂಗುಪ್ರಾಣಿಗಳ ಮೇಲೆ ಇರಬೇಡವೆ? ಕುಡಿಯುವುದಕ್ಕೆ ಹಾಲು, ಹೊದೆಯಲು ತುಬಟ—ಇವುಗಳನ್ನು ಕೊಡುವ ಮೇಕೆ ಕುರಿಗಳನ್ನು ಕಡಿಯುವುದು ಯಾವ ನ್ಯಾಯ? ಅಲ್ಲದೆ, ಇವುಗಳ ರಕ್ತ ಸುರಿಸಿದರೆ ನಮ್ಮ ಪಾಪ ಹೇಗೆ ಹೋದೀತು? ದೇವರುಗಳೆಂದರೆ, ಅವರು ಒಳ್ಳೆಯವರಲ್ಲವೆ?

ತಮ್ಮ ದಯೆ ಪ್ರೀತಿಗಳೆನ್ನು ಈ ಪ್ರಾಣಿಗಳ ರಕ್ತಕ್ಕಾಗಿ ಮಾರುವರೇನು? ಅದು ಬರಿಯ ಭ್ರಾಂತಿ! ನಾವು ಮಾಡಿದ ಪಾಪ—ನಾವು ಅನುಭವಿಸಬೇಕು. ನಾವು ಸುಖವಾಗಿರಬೇಕೆಂದರೆ—ಈ ಜೀವಹಿಂಸೆ ಬಿಡಬೇಕು. ಎಲ್ಲರೂ ಅಣ್ಣತಮ್ಮಂದಿರ ಹಾಗೆ ಇರಬೇಕು. ಒಬ್ಬರಿಗೆ ಒಬ್ಬರು ಪ್ರೀತಿ ವಿಶ್ವಾಸಗಳನ್ನು ತೋರಿಸಬೇಕು. ತಿನ್ನುವುದಕ್ಕೆ ಬೇಕೆಂದರೆ ಮೃಗಗಳ ಮಾಂಸವೇ ಆಗಬೇಕೆ? ಹಣ್ಣು ಕಾಯಿ ಇಲ್ಲವೆ? ಧಾನ್ಯ ದಿನಸಿಗಳಿಲ್ಲವೆ? ಒಬ್ಬರೊಡನೆ ಒಬ್ಬರು ಸೋದರ ಭಾವದಿಂದ ಇದ್ದರೆ, ಲೋಕದಲ್ಲಿ ದುಃಖ ಎಷ್ಟು ಕಡಮೆಯಾದೀತು!" ಎಂದನು.

ಗೌತಮನ ಮಾತಿನಲ್ಲಿ ಸಮಸ್ತ ಜೀವಿಗಳ ಮೇಲಿನ ಪ್ರೇಮವಿತ್ತು, ಕನಿಕರವಿತ್ತು, ಸಂಕಟವಿತ್ತು. ಆ ಮಾತು ಕೇಳಿದವರಿಗೂ ಕರುಣೆ ಹುಟ್ಟಿತು, ಆ ಪ್ರಾಣಿಗಳನ್ನು ಕಂಡು ಸಂಕಟವಾಯಿತು, ಅವುಗಳ ಮೇಲೆ ಪ್ರೀತಿ ಬಂತು. ದೊರೆಯೂ ಪೂಜಾರಿಗಳೂ ತಾವು ಮಾಡುತ್ತಿದ್ದ ಅಕಾರ್ಯವನ್ನು ನೆನೆದು ನಾಚಿದರು. ದೊರೆ ತನ್ನ ಅಜ್ಞಾನವನ್ನು ಒಪ್ಪಿಕೊಂಡು, ಗೌತಮನಿಗೆ ನಮಸ್ಕರಿಸಿ, ಪ್ರಾಣಿಹಿಂಸೆಯನ್ನು ನಿಲ್ಲಿಸುವಂತೆ ಮಾತುಕೊಟ್ಟನು. ಪೂಜಾರಿಗಳೂ ಯಜ್ಞಕ್ಕಾಗಿ ಹತ್ತಿಸಿದ್ದ ಬೆಂಕಿಯನ್ನು ಆರಿಸಿದರು. ಕಡಿಯುವುದಕ್ಕೆ ತಂದಿದ್ದ ಕತ್ತಿಗಳನ್ನು ಬಿಸುಟು, ಕೊಲ್ಲಲು ಕಟ್ಟಿದ್ದ ಕುರಿಗಳನ್ನು ಬಿಚ್ಚಿ ಬಿಟ್ಟುಬಿಟ್ಟರು. ದೊರೆ ದೇಶದಲ್ಲೆಲ್ಲ ಜನರನ್ನು ಕಳುಹಿಸಿ, "ಇನ್ನು ಮೇಲೆ ಈ ರಾಜ್ಯದಲ್ಲಿ ಪ್ರಾಣಿವಧೆಯಾಗಕೂಡದು. ಯಜ್ಞಕ್ಕಾಗಿ ಪಶುಗಳನ್ನು ಕೊಲ್ಲಕೂಡದು. ಮಾಂಸಕ್ಕಾಗಿ ಮೃಗಗಳನ್ನು ಕಡಿಯಕೂಡದು. ಜನರು ಸಸ್ಯಾಹಾರಿಗಳಾಗಿರಬೇಕು" ಎಂದು ಆಜ್ಞೆ ಮಾಡಿದನು. ಮೃಗಗಳಿಗೆಲ್ಲ ನಿರಾತಂಕವಾಯಿತು. ದೇಶದಲ್ಲಿ ಶಾಂತಿ ನೆಲಸಿತು.

## ೪. "ಅಳಬೇಡ, ತಾಯಿ, ಅಳಬೇಡ"

ಒಮ್ಮೆ ಗೌತಮನ ಬಳಿಗೆ ಕೃಶಾಗೌತಮಿ ಎಂಬ ಹೆಂಗಸು ಬಂದಳು. ಹಿಂದಿನ ದಿವಸ ಆಕೆಯ ಒಂದೇ ಮಗು ತೋಟದಲ್ಲಿ ಆಡುತ್ತಿರುವಾಗ ಅದನ್ನು ಹಾವು ಕಚ್ಚಿತು. ಮಗುವಿಗೆ ವಿಷ ಏರಿ ಅದು ಸತ್ತುಹೋಯಿತು. ಮಗುವನ್ನು ಬದುಕಿಸಿಕೊಡಿರೆಂದು ಕೃಶಾಗೌತಮಿ ಕಂಡಕಂಡವರಿಗೆಲ್ಲ ಕೈಮುಗಿದು ಗೋಳಾಡುತ್ತ ಕೇಳಿಕೊಂಡಳು. ಯಾರಿಗೂ ಏನು ಹೇಳಲೂ ತೋಚಲಿಲ್ಲ.

ಕಡೆಗೆ ಆಕೆ ಆ ಸತ್ತ ಮಗುವನ್ನು ಎತ್ತಿಕೊಂಡು ಗೌತಮನ ಬಳಿಗೆ ಬಂದಳು. ಮಗು ಸತ್ತುಹೋಗಿತ್ತೆಂದು ಆತನಿಗೆ ಗೊತ್ತಿತ್ತು. ಆದರೆ ಸತ್ತ ಮಗು ಬದುಕುವುದಿಲ್ಲವೆಂದರೆ, ಆ ತಾಯಿ ಕೇಳಿ ಸಹಿಸಿಯಾಳೆ! ಆಕೆಗೆ ಸಂಕಟ ಉಂಟು ಮಾಡಬಾರದೆಂದು ಗೌತಮನು ಕನಿಕರಿಸಿ, "ತಂಗಿ! ಯಾರ ಮನೆಗಾದರೂ ಹೋಗಿ ಕೊಂಚ ಸಾಸಿವೆ ತಾ; ನಿನ್ನ ಮಗುವಿಗೆ ಗುಣವಾಗುವುದು. ಆದರೆ ನೀನು ಸಾಸಿವೆ ತರುವ ಮನೆಯಲ್ಲಿ ಹೆಂಗಸಾಗಲಿ ಗಂಡಸಾಗಲಿ, ಮಗುವಾಗಲಿ ಮುದುಕರಾಗಲಿ, ಸತ್ತಿರಕೂಡದು" ಎಂದನು. ಕೃಶಾಗೌತಮಿ ತನ್ನ ಸತ್ತ ಮಗುವನ್ನು ಎತ್ತಿಕೊಂಡು, ಮನೆಮನೆಗೂ ಹೋಗಿ ಸಾಸಿವೆ ಕೇಳಿದಳು. ಆದರೆ ಪ್ರತಿ ಮನೆಯಲ್ಲಿಯೂ ಯಾರಾದರೂ ಒಬ್ಬರು ಸತ್ತಿರುವರು—ಒಂದು ಮನೆಯಲ್ಲಿ ತಂದೆ, ಒಂದು ಮನೆಯಲ್ಲಿ ಮಗು, ಇನ್ನೊಂದು ಕಡೆ ಅಣ್ಣ, ಎಲ್ಲೆಲ್ಲಿಯೂ ಹೀಗೆಯೇ! ಸಾವು ಇಣಿಕಿ ನೋಡದ ಮನೆಯೇ ಸಿಕ್ಕಲಿಲ್ಲ. ಕೃಶಾಗೌತಮಿ ನಿರಾಶೆಯಿಂದ ಹಿಂದಿರುಗಿದಳು. ಸಾವನ್ನು ತಪ್ಪಿಸಿಕೊಳ್ಳುವುದು ಯಾರಿಗೂ ಸಾಧ್ಯವಿಲ್ಲವೆಂಬುದನ್ನು ತಾನಾಗಿ ಕಂಡುಕೊಂಡು ಬಂದು ನಡೆದು ದನ್ನೆಲ್ಲ ಗೌತಮನಲ್ಲಿ ಹೇಳಿಕೊಂಡಳು. ಗೌತಮನು ಅವಳನ್ನು ಕುರಿತು ಕರುಣೆ ತುಂಬಿದ ಮಾತಿನಲ್ಲಿ "ತಂಗಿ! ಹೀಗೆಯೇ ಆಗುವುದೆಂದು ನನಗೆ ಗೊತ್ತು. ನೀನು ನೆನ್ನೆ ಬಂದಾಗ, ನಿಜಸ್ಥಿತಿಯನ್ನು ಹೇಳಿದರೆ ಸಹಿಸುವೆಯೋ ಇಲ್ಲವೋ ಎಂದು ನಿನಗೆ ತಿಳಿಸಲಿಲ್ಲ. ಈಗ ನೀನು ಮನೆಮನೆಗೂ ಹೋಗಿದ್ದೀಯೆ. ಮನೆಮನೆಯಲ್ಲೂ ಯಾರಾದರೂ ಸಾಯಲೇಬೇಕೆಂಬುದನ್ನು ಕಂಡಿದ್ದೀಯೆ. ಈ ದಿನ ಅರಳಿದ ಹೂ ನಾಳೆ ಬಾಡುವುದೆಂದು ನಿನಗೇ ಗೊತ್ತಾಗಿದೆ. ಈ ತೆರದ ದುಃಖ ಎಲ್ಲರಿಗೂ ಬರತಕ್ಕದೆಂದು ತಿಳಿದು ಸಮಾಧಾನ ತಂದುಕೊಳ್ಳಬೇಕು." ಎಂದು ಸಂತೈಸಿದನು. ಕೃಶಾಗೌತಮಿ ಸಮಾಧಾನ ತಂದುಕೊಂಡು, ಮಗುವನ್ನು ಮಣ್ಣಿನಲ್ಲಿ ಮಲಗಿಸಲು ಹೊರಟಳು.

## ೫. ಕರುಣೆಯಿದ್ದವನೇ ಉತ್ತಮನು

ಗೌತಮನು ಒಂದು ಸಲ ಆಯಾಸದಿಂದ ಮೂರ್ಛೆಹೋದನು. ಅದೇ ದಾರಿಯಲ್ಲಿ ಬಂದ ಒಬ್ಬ ಕುರುಬರ ಹುಡುಗನಿಗೆ ಆತನನ್ನು ಕಂಡು

ಕನಿಕರವಾಯಿತು. ಓಡಿಹೋಗಿ ಕೊಂಬೆಗಳನ್ನು ಮುರಿದು ತಂದು, ಆತನ ಮುಖದ ಮೇಲೆ ಬಿಸಿಲು ಬೀಳದ ಹಾಗೆ ನೆರಳು ಮಾಡಿದನು. ಹೀನನಾದ ತಾನು ಆ ಸಂನ್ಯಾಸಿಯನ್ನು ಮುಟ್ಟಬಾರದು ಎಂದುಕೊಂಡು, ಆಡಿನ ಮೊಲೆಯಿಂದಲೇ ಆತನ ಬಾಯಿಗೆ ಕೊಂಚ ಹಾಲು ಕರೆದನು. ನಸುಬೆಚ್ಚಗಿದ್ದ ಆ ಹಾಲು ಬಿದ್ದು ಗೌತಮನ ಮೂರ್ಛೆ ತಿಳಿಯಿತು. ಆತನು ಮೆಲ್ಲನೆ ಮೇಲೆದ್ದು ಆ ಹುಡುಗನ ಕಡೆ ತಿರುಗಿ, “ ನಿನ್ನ ಬಟ್ಟಲಿನಲ್ಲಿ ಕೊಂಚ ಹಾಲು ಕೊಡು ” ಎಂದನು. ಹುಡುಗನು “ ನಾನು ಕೊಡಬಾರದು, ಸ್ವಾಮಿ. ನಾನು ಹೀನ. ನನ್ನನ್ನು ಮುಟ್ಟಿದರೆ ತಮಗೆ ಮೈಲಿಗೆಯಾದೀತು ” ಎಂದನು. ಗೌತಮನ ಮುಖದಲ್ಲಿ ವರ್ಣಿಸಲಾಗದಂತಹ ನೋವು ಕಾಣಿಸಿತು. ಆ ಕುರುಬರ ಹುಡುಗನನ್ನು ಹತ್ತಿರಕ್ಕೆ ಕರೆದು ಕುಳ್ಳಿರಿಸಿಕೊಂಡು, “ ತಮ್ಮ ! ದಯೆ ಎಲ್ಲಿರುವುದೋ ಅಲ್ಲಿ ಎಲ್ಲರೂ ಸೋದರರು. ನಮ್ಮ ಇಬ್ಬರ ಮೈಯಲ್ಲಿಯೂ ರಕ್ತವಿದೆ—ಅವುಗಳ ಬಣ್ಣ ಒಂದೇ. ನಮ್ಮಿಬ್ಬರ ಕಣ್ಣಲ್ಲಿಯೂ ನೀರು ಬರುತ್ತದೆ—ಎರಡು ಕಣ್ಣೀರಿನಲ್ಲಿಯೂ ಉಪ್ಪು ಇದೆ. ಹೀಗಿರುವಾಗ ನಾನು ಉತ್ತಮ, ನೀನು ಹೀನ ಎಂಬುದು ಹೇಗೆ ? ಕೇಳು ತಮ್ಮ ! ದಯೆ ಉಳ್ಳವನು ಉತ್ತಮ—ದಯೆ ಇಲ್ಲದವನು ಹೀನ. ಕರುಣೆ, ಪ್ರೇಮ, ಕನಿಕರಗಳುಳ್ಳವನು ಉತ್ತಮ—ಅದಿಲ್ಲದವನು ಹೀನ. ಒಳ್ಳೆಯ ಕೆಲಸಗಳನ್ನು ಮಾಡುವವನು ಉತ್ತಮ—ಕೆಟ್ಟ ಕೆಲಸ ಮಾಡುವವನು ಹೀನ. ಇನ್ನಾದರೂ ನೀನು ನನಗೆ ನಿನ್ನ ಬಟ್ಟಲಿನಿಂದ ಕುಡಿಸಬಾರದೆ ? ” ಎಂದನು. ಅಂತಹ ಮಾತನ್ನು ಎಂದೂ ಕೇಳದ ಹುಡುಗನು ಹಾಲು ತುಂಬಿದ ತನ್ನ ಬಟ್ಟಲನ್ನು ಸಂತೋಷದಿಂದ ಗೌತಮನಿಗೆ ಕೊಟ್ಟನು. ಗೌತಮನು ಅದನ್ನು ಕುಡಿದು ಚೇತರಿಸಿಕೊಂಡನು.

## ೬. “ ಸುಳ್ಳು ಹೇಳಬಾರದು ”

ಬುದ್ಧನು ತನ್ನ ಊರಿಗೆ ಬಂದು ಒಂದು ವಾರವಾದಾಗ ಯಶೋಧರೆ ರಾಹುಳನನ್ನು ಬುದ್ಧನ ಹತ್ತಿರ ಕಳುಹಿಸಿದಳು. ಬುದ್ಧನು ರಾಹುಳನನ್ನು ಪ್ರೀತಿಯಿಂದ ಕರೆದು, “ ರಾಹುಳನು ದೊರೆಯಾದರೆ ನಶ್ವರವಾದ ರಾಜ್ಯ ಮಾತ್ರ ಇವನ ಪಾಲಿಗೆ ಬರುವುದು. ಅದರ ಬದಲು ಶಾಶ್ವತವಾದ ಧರ್ಮವನ್ನು ನಾನು ಇವನಿಗೆ

ಕೊಡುವೆನು'' ಎಂದು ರಾಹುಳನನ್ನು ಸಂಘಕ್ಕೆ ಸೇರಿಸಿಕೊಂಡನು. ಆ ಸಮಯ ದಲ್ಲಿ ಅವನನ್ನು ಹತ್ತಿರ ಕರೆದು, ಸುಳ್ಳು ಹೇಳುವುದು ಕೆಟ್ಟದ್ದೆಂದು ಅವನಿಗೆ ತಿಳಿಸಿದನು. ತಾನು ಕುಳಿತು, ''ರಾಹುಳ! ಒಂದು ಪಾತ್ರೆಯಲ್ಲಿ ನೀರು ತಂದು, ನನ್ನ ಕಾಲು ತೊಳೆಯುವೆಯ?'' ಎಂದನು. ರಾಹುಳನು ಸಡಗರದಿಂದ ನೀರು ತಂದು, ಸಂತೋಷದಿಂದ ಆತನ ಕಾಲು ತೊಳೆದನು. ಕಾಲು ತೊಳೆದ ಮೇಲೆ, ಬುದ್ಧನು ಆ ಕಾಲು ತೊಳೆದ ನೀರನ್ನು ರಾಹುಳನಿಗೆ ತೋರಿಸಿ, ''ರಾಹುಳ! ಈ ನೀರನ್ನು ಕುಡಿಯಬಹುದೆ?'' ಎಂದನು. ರಾಹುಳನು ''ಕುಡಿಯಬಾರದು. ಅದು ಕೊಳೆ ತುಂಬಿದ ನೀರು'' ಎನ್ನಲು, ಬುದ್ಧನು ''ರಾಹುಳ! ಸುಳ್ಳು ಹೇಳುವವರು ಕೂಡ ಈ ನೀರಿನ ಹಾಗೆಯೆ! ಅವರ ಮನಸ್ಸಿನ ತುಂಬ ಕೊಳೆ ತುಂಬಿಕೊಂಡಿದೆ'' ಎಂದನು. ಹಾಗೆ ಹೇಳಿ, ಆ ಕೊಳೆ ನೀರನ್ನು ಪಾತ್ರೆ ಯಿಂದ ಚೆಲ್ಲಿ, ''ರಾಹುಳ! ಈ ಪಾತ್ರೆಯಲ್ಲಿ ಕುಡಿಯುವ ನೀರನ್ನು ಇಡ ಬಹುದೆ?'' ಎಂದು ಕೇಳಿದನು. ರಾಹುಳನು ''ಅದು ಹೇಗೆ ಆದೀತು! ಕೊಳೆ ನೀರು ಇಟ್ಟಿದ್ದ ಪಾತ್ರೆಯಲ್ಲಿ ಕುಡಿಯುವ ನೀರನ್ನು ಇಡುತ್ತಾರೆಯೆ? ಆ ಪಾತ್ರೆಯನ್ನು ಬಿಸಾಡಬೇಕು'' ಎಂದನು. ಆಗ ಬುದ್ಧನು ''ನೋಡಿದೆಯ! ಕೊಳೆ ನೀರನ್ನು ತುಂಬಿದ್ದುದರಿಂದ ಈ ಪಾತ್ರೆಗೆ ಏನೂ ಬೆಲೆಯಿಲ್ಲದೆ ಹೋಯಿತು. ಇದನ್ನು ಒಡೆದರೆ ಯಾರಿಗೂ ದುಃಖವಿಲ್ಲ. ಸುಳ್ಳು ಹೇಳುವವರ ವಿಷಯದಲ್ಲಿಯೂ ಹೀಗೆಯೇ, ನೋಡು. ಅವರನ್ನು ಯಾರೂ ಲಕ್ಷ್ಯಕ್ಕೇ ತರು ವುದಿಲ್ಲ. ಅವರು ಸತ್ತಾಗ, ಅವರನ್ನು ಯಾರೂ ಜ್ಞಾಪಿಸಿಕೊಂಡು ಅಳುವುದಿಲ್ಲ'' ಎಂದು ಬುದ್ಧಿವಾದ ಹೇಳಿದನು.

## ೭. ''ಬಯ್ದವನನ್ನು ಬಯ್ಯಬಾರದು''

ಇನ್ನೊಂದು ಸಲ, ಒಬ್ಬನು ಬುದ್ಧನನ್ನು ಸಿಕ್ಕಿದ ಹಾಗೆಲ್ಲ ಬೈಯಲು ತೊಡಗಿದನು. ಬುದ್ಧನ ಹೆಸರು ಮುಂದೆ ಬರುತ್ತಿದ್ದುದನ್ನು ಕಂಡು ಸಹಿಸ ಲಾರದೆ ಹೋದವನು ಅವನು. ಅವನು ಏನೇನು ಬೈದರೂ ಬುದ್ಧನು ಮಾತಾ ಡಲಿಲ್ಲ. ಕಡೆಗೆ, ಬಂದವನಿಗೇ ಬೇಜಾರಾಗಿ, ಸಾಕಾಗಿ, ಬೈಯುವುದನ್ನು ನಿಲ್ಲಿ ಸಿದನು. ಆಗ ಬುದ್ಧನು ''ಅಯ್ಯ! ಒಬ್ಬನು ಇನ್ನೊಬ್ಬನಿಗೆ ಏನಾದರೂ

ಕೊಡುತ್ತಾನೆ ಎನ್ನು. ಆ ಇನ್ನೊಬ್ಬನು ಅದನ್ನು ತೆಗೆದುಕೊಳ್ಳದೆ ಹೋದರೆ, ಅದು ಯಾರಿಗೆ ಸೇರಬೇಕು?'' ಎಂದು ಕೇಳಿದನು. ಆ ಮನುಷ್ಯನು ''ಅದು ಕೊಡಲು ಬಂದವನಿಗೆ ತಾನೆ ಸೇರಬೇಕು!'' ಎಂದನು. ಅದಕ್ಕೆ ಬುದ್ಧನು ''ಅಯ್ಯ! ನೋಡು, ನೀನು ನನಗೆ ಬೈಗುಳನ್ನು ಕೊಡಲು ಬಂದವನು. ಆ ಬೈಗುಳು ನನಗೆ ಬೇಡವಾದುದರಿಂದ ಅದು ನಿನಗೆ ತಾನೇ ಸೇರಬೇಕಾದುದು!'' ಎಂದು ನುಡಿದನು. ಆಗ ಎದುರಾಳಿಗೆ ನಾಚಿಕೆಯಾಯಿತು. ತಾನು ಮಾಡಿದುದು ಎಂತಹ ಬುದ್ಧಿಯಿಲ್ಲದ ಕೆಲಸ ಎಂಬುದು ಅವನ ಮನಸ್ಸಿಗೇ ತೋರಿಬಂತು. ಬುದ್ಧನ ಕಾಲಿಗೆ ಬಿದ್ದು ತನ್ನ ತಪ್ಪು ಒಪ್ಪಿಕೊಂಡನು. ಬುದ್ಧನು ಕನಿಕರಪಟ್ಟು ಅವನನ್ನು ಕುಳ್ಳಿರಿಸಿಕೊಂಡು ಅವನಿಗೆ ಧರ್ಮವನ್ನು ಉಪದೇಶಿಸಿದನು. ಬಂದಿದ್ದವನು ಆ ಉಪದೇಶದಿಂದ ಪ್ರಯೋಜನ ಹೊಂದಿ ಬುದ್ಧನ ಶಿಷ್ಯನಾದನು.

## ೮. ''ಕೋಪ ಬೇಡ ; ಸಹನೆ ಇರಲಿ''

ಒಂದು ಸಲ, ಸುಪ್ರಿಯ ಎಂಬವನು ಬುದ್ಧನನ್ನು ಪರೋಕ್ಷದಲ್ಲಿ ತೆಗಳಿದನು. ಕೆಲವು ಭಿಕ್ಷುಗಳು ಅದನ್ನು ಬುದ್ಧನಿಗೆ ತಿಳಿಸಿದರು. ಆಗ ಬುದ್ಧನು ಆ ಭಿಕ್ಷುಗಳನ್ನು ಕರೆದು ಕುಳ್ಳಿರಿಸಿಕೊಂಡು, ಅವರಿಗೆ ಈ ರೀತಿ ನುಡಿದನು: ''ಭಿಕ್ಷುಗಳೆ! ಹೊರಗಿನವರು ನನ್ನನ್ನೋ ಧರ್ಮವನ್ನೋ ಸಂಘವನ್ನೋ ಕುರಿತು ಆಗದ ಹಾಗೆ ಮಾತನಾಡಿದರೆ, ಅದಕ್ಕಾಗಿ ನೀವು ಅವರನ್ನು ದ್ವೇಷಿಸಬೇಡಿ; ಅದಕ್ಕಾಗಿ ಉರಿಯಬೇಡಿ, ಮನಸ್ಸಿನಲ್ಲಿ ಕಿರಿಕಿರಿಪಡಬೇಡಿ. ಅದೇ ಕಾರಣವಾಗಿ ನೀವು ಕೋಪಿಸಿ ನೊಂದರೆ, ಅದು ನಿಮ್ಮ ಆತ್ಮಜಯಕ್ಕೆ ಅಡ್ಡಿಯಾಗುವುದು. ಹೆರವರು ನಮಗೆ ಆಗದಂತೆ ನುಡಿದಾಗ ನಾವು ಅದಕ್ಕೆ ಕೋಪಗೊಂಡು ಅಸಮಾಧಾನಪಟ್ಟರೆ, ಅವರು ಅಂದದ್ದು ಸರಿಯೋ ತಪ್ಪೋ ಎಂದು ನಾವು ಪರೀಕ್ಷಿಸಲು ಆಗುವುದೆ? ಅದರ ಬದಲು ಅವರು ಹಾಗೆ ಹೇಳಿದಾಗ, ಸುಳ್ಳನ್ನು ಬಿಚ್ಚಿ, ಅದು ತಪ್ಪೆಂದು ತೋರಿಸಬೇಕು. 'ಇದರಿಂದ ಇದು ಹೀಗಲ್ಲ. ಇದರಿಂದ ಅದು ಹಾಗಲ್ಲ. ಇದು ನಮ್ಮಲ್ಲಿ ಕಾಣಿಸದು. ಇದು ನಮ್ಮಲ್ಲಿ ಇಲ್ಲ' ಎನ್ನಬೇಕು. ಅಮೂ ಅಲ್ಲದೆ, ಭಿಕ್ಷುಗಳೆ, ಹೊರಗಿನವರು ನನ್ನನ್ನೋ ಧರ್ಮವನ್ನೋ ಸಂಘ

ವನ್ನೋ ಕುರಿತು ಆಗುವಂತೆ ಮಾತನಾಡಿದರೆ, ಅದಕ್ಕಾಗಿ ನೀವು ಸಂತೋಷ ಪಡಕೂಡದು, ಹಿಗ್ಗಕೂಡದು, ಅರಳಕೂಡದು. ಹಾಗೆ ಮಾಡಿದರೆ, ಅದು ಕೂಡ ನಿಮ್ಮ ಆತ್ಮಜಯಕ್ಕೆ ಅಡ್ಡಿಯಾಗುವುದು. ಅದರ ಬದಲು, ಅವರು ಹಾಗೆ ಹೊಗಳಿದಾಗ, ಸತ್ಯವನ್ನು ಒಪ್ಪಿಕೊಳ್ಳಬೇಕು. 'ಇದರಿಂದ ಇದು ಹೀಗೆ, ಇದರಿಂದ ಅದು ಹಾಗೆ. ಇದು ನಮ್ಮಲ್ಲಿ ಕಾಣುವುದು. ಇದು ನಮ್ಮಲ್ಲಿ ಇದೆ' ಎನ್ನಬೇಕು." ಇಂತಹ ಬುದ್ಧಿವಾದವನ್ನು ಭಿಕ್ಷುಗಳಿಗೆ ಹೇಳು ತ್ತಿದ್ದುದು ಮಾತ್ರವಲ್ಲ, ಬುದ್ಧನು ತಾನು ಕೂಡ ಅದರಂತೆಯೇ ನಡೆಯು ತ್ತಿದ್ದನು.

## ೯. "ಜಗಳಗಂಟಿಗರ ಜೊತೆ ಬೇಡ"

ಮುಂದೆ ಒಂಬತ್ತನೆಯ ವರ್ಷಾಕಾಲವು ಕೌಶಾಂಬಿಯಲ್ಲಿನ ಘೋಷಿತಾ ರಾಮದಲ್ಲಿ ಕಳೆಯಿತು. ಆಗ ಅಲ್ಲಿಯ ಸಂಘದಲ್ಲಿ ಒಬ್ಬ ಭಿಕ್ಷು ಏನೋ ತಪ್ಪು ಮಾಡಿದನು. ಕೆಲವರು ಅವನ ತಪ್ಪನ್ನು ಖಂಡಿಸಿದರು. ಅವನು ಮಾಡಿದುದು ಸರಿಯೆಂದು ಕೆಲವರು ಸಾಧಿಸಿದರು. ಅವರವರಿಗೆ ಮಾತಿಗೆ ಮಾತು ಬೆಳೆದು, ಅವರಲ್ಲೇ ಎರಡು ಪಂಗಡವಾಯಿತು. ಬರುಬರುತ್ತ ಜಗಳ ಜೋರಾಯಿತು. ಅವರ ಜಗಳವನ್ನು ನಿಲ್ಲಿಸಲು ಬುದ್ಧನು ಎಷ್ಟೆಷ್ಟೋ ಪ್ರಯತ್ನಪಟ್ಟನು. ಎಷ್ಟು ಸಮಾಧಾನಪಡಿಸಿದರೂ, ಎಷ್ಟು ಹಿತವಾದ ಹೇಳಿದರೂ, ಅವರ ಮನಸ್ತಾಪ ನಿಲ್ಲಲಿಲ್ಲ. ಅವರ ಕಲಹಗಳನ್ನೂ ಒಡಕುಗಳನ್ನೂ ಕಂಡು ಬುದ್ಧನಿಗೆ ಅಸಹ್ಯ ವಾಯಿತು. "ಇಂತಹವರಿಗೆ ಎಷ್ಟು ಬುದ್ಧಿವಾದ ಹೇಳಿದರೂ ದಂಡ. ಮೂರ್ಖರ ಮಧ್ಯೆ ಇರಬಾರದು" ಎಂದು ಅವರನ್ನು ಬಿಟ್ಟು, ಪಾರಿಲೆಯ್ಯಕ ಎಂಬ ಕಾಡಿಗೆ ಹೋದನು. ಅಲ್ಲಿ ಕೊಂಚ ಕಾಲವಿದ್ದು, ಹತ್ತನೆಯ ವರ್ಷಾಕಾಲದ ವೇಳೆಗೆ ಶ್ರಾವಸ್ತಿಗೆ ಬಂದನು. ಅಷ್ಟುಹೊತ್ತಿಗೆ, ಕೌಶಾಂಬಿಯಲ್ಲಿ ಜಗಳವಾಡುತ್ತಿದ್ದ ಭಿಕ್ಷುಗಳು ತಮ್ಮ ಮೂರ್ಖತನವನ್ನು ಕಂಡುಕೊಂಡಿದ್ದರು. ಅವರವರಲ್ಲಿ ಇದ್ದ ಒಳಕಲಹಗಳಿಗೆ ಬೇಜಾರುಪಟ್ಟು, ಕೌಶಾಂಬಿಯ ಜನರು ಅವರನ್ನು ಕಂಡಕಡೆ ಹೀಯಾಳಿಸುತ್ತಿದ್ದರು. ಆ ಭಿಕ್ಷುಗಳನ್ನು ಕಂಡರೆ ಜನರಿಗೆ ಕೊಂಚವೂ ಗೌರವ ವಿರಲಿಲ್ಲ. ಅದಕ್ಕಾಗಿ ಭಿಕ್ಷುಗಳು ಕೌಶಾಂಬಿಯಿಂದ ಶ್ರಾವಸ್ತಿಗೆ ಹೋದರು.

ಬುದ್ಧನನ್ನು ಕಂಡು ತಮ್ಮ ತಪ್ಪನ್ನು ಒಪ್ಪಿಕೊಂಡರು. ಬುದ್ಧನು ಅವರ ಪಶ್ಚಾತ್ತಾಪವನ್ನು ನೋಡಿ, ಒಡೆದಿದ್ದ ಸಂಘವನ್ನು ಮೊದಲಿನ ಹಾಗೆ ಒಂದು ಮಾಡಿ ಕಳುಹಿಸಿಕೊಟ್ಟನು.

## ೧೦. ಭಗವಂತನ ಆರಂಬದ ರೀತಿ

ಬುದ್ಧನು ಹನ್ನೊಂದನೆಯ ವರ್ಷಾಕಾಲಕ್ಕೆ ರಾಜಗೃಹಕ್ಕೆ ಹೋದನು. ಆಗ ಸುಗ್ಗಿಯ ಸಮಯ. ಎಲ್ಲರೂ ಹೊಲಗಳಿಗೆ ಹೋಗಿ ಕುಯಿಲು ಮಾಡುತ್ತಿದ್ದರು. ಹೆಂಗಸರು ಮಕ್ಕಳು ಕೂಡ ಬಂದು ದೊಡ್ಡವರ ಜೊತೆಗೆ ಸಹಾಯ ಮಾಡುತ್ತಿದ್ದರು. ಒಂದು ದಿನ ಬೆಳಗ್ಗೆ, ಬುದ್ಧನು ಭಿಕ್ಷೆಗಾಗಿ ಹೊರಟು, ಕೆಲಸಗಾರರಿಗೆ ಅನ್ನ ಹಾಕುತ್ತಿದ್ದ ಕಡೆಗೆ ಹೋದನು. ಬುದ್ಧನು ಭಿಕ್ಷೆಯೆತ್ತುವುದನ್ನು ಕಂಡು, ಅಲ್ಲಿಯ ಜಮೀನುದಾರನಾದ ಭಾರದ್ವಾಜನೆಂಬ ಬ್ರಾಹ್ಮಣನಿಗೆ ಅಸಮಾಧಾನವಾಯಿತು. ಬುದ್ಧನನ್ನು ಹತ್ತಿರ ಕರೆದು, "ಗೌತಮ! ನಾನು ಈ ಹೊಲವನ್ನು ಉತ್ತು ಬಿತ್ತಿ ಕಾಳು ಕುಯಿದಿದ್ದೇನೆ. ಕಷ್ಟಪಟ್ಟು ಸಂಪಾದಿಸಿ ಅನುಭವಿಸುತ್ತೇನೆ. ಆದರೆ ನೀನು ಉತ್ತಿಲ್ಲ, ಬಿತ್ತಿಲ್ಲ. ಏನೂ ಕೆಲಸ ಮಾಡದೆ ಹೀಗೆ ಊಟಕ್ಕೆ ಸಿದ್ಧನಾಗುವುದು ಸರಿಯಲ್ಲ!" ಎಂದನು. ಬುದ್ಧನು ಅವನ ಮಾತಿಗೆ ಕೋಪಿಸಿಕೊಳ್ಳದೆ, "ಬ್ರಾಹ್ಮಣ! ನಾನು ಕೂಡ ಉತ್ತಿರುವೆನು, ಬಿತ್ತಿರುವೆನು. ಆದ್ದರಿಂದ ನಾನೂ ಊಟಕ್ಕೆ ಸಿದ್ಧನಾಗುವುದು ನ್ಯಾಯ" ಎಂದನು. ಬ್ರಾಹ್ಮಣನಿಗೆ ಅರ್ಥವಾಗಲಿಲ್ಲ. "ಹಾಗಾದರೆ ನಿನ್ನ ನೇಗಿಲು ಎಲ್ಲಿ? ನೊಗವೆಲ್ಲಿ? ಎತ್ತುಗಳೆಲ್ಲಿ?" ಎಂದನು. ಬುದ್ಧನು "ಬ್ರಾಹ್ಮಣ! ನಿಮ್ಮ ಆರಂಬದ ರೀತಿಯೇ ಬೇರೆ, ನಮ್ಮದರ ರೀತಿಯೇ ಬೇರೆ. ಧರ್ಮದಲ್ಲಿ ನಿಲ್ಲಿಸಬೇಕಾದ ನಂಬಿಕೆಯೇ ನಾನು ಬಿತ್ತುವ ಬೀಜ. ಪಶ್ಚಾತ್ತಾಪವೇ ಆ ಬೀಜದ ಬೆಳವಣಿಗೆಗೆ ನೀರು. ಜ್ಞಾನವೇ ನೇಗಿಲು. ಶ್ರದ್ಧೆಯೇ ಅದನ್ನು ಎಳೆಯುವ ಎತ್ತು. ಅಜ್ಞಾನ, ಪಾಪ ಎಂಬ ಕಳೆಗಳನ್ನು ಸತ್ಯದಿಂದ ಕಿತ್ತುಹಾಕುತ್ತೇನೆ. ಮನಸ್ಸಿನ ಶಾಂತಿಯೇ ನಾನು ಕುಯ್ಯುವ ಕುಯಿಲು" ಎಂದನು. ಬ್ರಾಹ್ಮಣನಿಗೆ ಆ ಮಾತು ಕೇಳಿ ಕುತೂಹಲ ಹುಟ್ಟಿತು. ಬುದ್ಧನ ಹತ್ತಿರ ಉಪದೇಶ ತೆಗೆದುಕೊಂಡು, ಆತನೂ ಬುದ್ಧನ ಶಿಷ್ಯನಾದನು.

## ೧೧. ರೋಗಿಯ ಉಪಚಾರ

ಒಂದು ಸಲ, ಒಬ್ಬ ಭಿಕ್ಷುವಿಗೆ ರೋಗ ಬಂತು. ಆತನ ಸಹಾಯಕ್ಕೆ ಯಾವ ಭಿಕ್ಷುವೂ ಹೋಗಲಿಲ್ಲ. ಆತ ತನ್ನ ಮಲಮೂತ್ರಗಳಲ್ಲಿಯೇ ಬಿದ್ದು ಕೊಂಡು ಒದ್ದಾಡುತ್ತಿದ್ದ. ಭಿಕ್ಷುಗಳೆಲ್ಲರೂ ಅಸಹ್ಯಪಟ್ಟುಕೊಂಡು ದೂರ ಹೊರಟುಹೋದರು. ಆ ಸುದ್ದಿ ಹೇಗೋ ಬುದ್ಧನಿಗೆ ಗೊತ್ತಾಯಿತು. ಆತನು ಕೂಡಲೆ ಆ ರೋಗಿಯಿದ್ದ ಕಡೆಗೆ ಹೋಗಿ, ಅವನ ಮಲಮೂತ್ರಗಳನ್ನು ತಾನೇ ಎತ್ತಿಹಾಕಿ, ಅವನ ಮೈ ತೊಳೆದು ಮಲಗಿಸಿ, ಆರೈಕೆ ಮಾಡಿದನು. ಆಮೇಲೆ ಎಲ್ಲ ಭಿಕ್ಷುಗಳನ್ನು ಕರೆದು, "ಭಿಕ್ಷುಗಳೆ, ನಿಮಗೆ ತಂದೆಯಿಲ್ಲ, ತಾಯಿಯಿಲ್ಲ. ಆದುದರಿಂದ ನೀವು ಒಬ್ಬರಿಗೊಬ್ಬರು ತಂದೆತಾಯಿಗಳ ಹಾಗಿರಬೇಕು. ನನ್ನನ್ನು ಉಪಚರಿಸಿ ಸೇವಿಸುವ ಹಾಗೆಯೇ ರೋಗಿಗಳನ್ನೂ ಸೇವಿಸಿರಿ" ಎಂದನು.

ಇನ್ನೊಂದು ಸಲ, ಚಿಕ್ಕಪಂಥಕ ಎಂಬವನನ್ನು ಅವನ ಮನೆಯವರು ಹೊರಗೆ ಓಡಿಸಿಬಿಟ್ಟಿದ್ದರು. ಅವನು ಬಂದು, ಬುದ್ಧನು ತಂಗಿದ್ದ ವಿಹಾರದ ಬಾಗಿಲಲ್ಲಿ ಚಳಿಗೆ ನಡುಗುತ್ತ ನಿಂತಿದ್ದನು. ಬುದ್ಧನು ಅವನನ್ನು ಕಂಡು, ತಾನೆ ಎದ್ದು ಬಂದು, ಅವನ ತಲೆಯನ್ನು ನೇವರಿಸಿ, ಕೈಹಿಡಿದು ವಿಹಾರದ ಒಳಕ್ಕೆ ಕರೆದುಕೊಂಡು ಹೋಗಿ ಉಪಚರಿಸಿದನು.

## ೧೨. ಪ್ರೀತಿಯ ಪ್ರಭಾವ

ದೇವದತ್ತನಿಗೆ ಇನ್ನೂ ಬುದ್ಧಿ ಬರಲಿಲ್ಲ. ಬುದ್ಧನನ್ನು ಕೊಲ್ಲುವ ಯೋಚನೆ ಇನ್ನೂ ನಿಲ್ಲಲಿಲ್ಲ. ಅಜಾತಶತ್ರುವಿನ ಅರಮನೆಯಲ್ಲಿ ನಾಲಾಗಿರಿಯೆಂಬ ಒಂದು ಮದದಾನೆಯಿತ್ತು. ದೇವದತ್ತನು ಅದಕ್ಕೆ ಹೆಂಡ ಕುಡಿಸಿ, ಅದನ್ನು ಹೊಡೆದು ಬಡಿದು ರೇಗಿಸಿ, ರಾಜಗೃಹದ ರಾಜಮಾರ್ಗದಲ್ಲಿ ಓಡಿಸಿಬಿಟ್ಟನು. ಆ ಆನೆ ಹುಚ್ಚುಹುಚ್ಚಾಗಿ ಆಡುತ್ತ, ಘೀಂಕರಿಸುತ್ತ, ಓಡಿ ಬರುತ್ತಿತ್ತು. ಬುದ್ಧನು ಆಗತಾನೆ ಭಿಕ್ಷೆಗೆ ಹೊರಟಿದ್ದನು. ಆತನ ಜೊತೆಯಲ್ಲಿ ಆನಂದನೂ ಇನ್ನೂ ಹಲವರು ಭಿಕ್ಷುಗಳೂ ಬರುತ್ತಿದ್ದರು. ಎದುರಿಗೆ ನುಗ್ಗಿ ಬರುತ್ತಿದ್ದ ಆನೆಯನ್ನು ಕಂಡು ಭಿಕ್ಷುಗಳು ಹೆದರಿ ಚೆಲ್ಲಾಪಿಲ್ಲಿಯಾಗಿ ಓಡಿಹೋದರು. ಬುದ್ಧನು

ಓಡಲಿಲ್ಲ, ಆನಂದನೂ ಓಡಲಿಲ್ಲ. ಅಂತಹ ಅಪಾಯಕಾಲದಲ್ಲಿ ಗುರುವನ್ನು ಬಿಟ್ಟು ಹೋಗಲು ಆತನಿಗೆ ಮನಸ್ಸು ಬರಲಿಲ್ಲ. ಬುದ್ಧನು ಶಾಂತನಾಗಿ, ಸಮಾಧಾನ ದಿಂದ ಆನೆಯ ಎದುರಿಗೆ ನಿಂತನು. ಓಡಿ ಬರುತ್ತಿದ್ದ ಆನೆಯು ಬುದ್ಧನ ಮುಖದಲ್ಲಿ ಉಕ್ಕಿಬರುತ್ತಿದ್ದ ಪ್ರೀತಿ ಕರುಣೆಗಳನ್ನು ಕಂಡಿತು, ಬುದ್ಧನು ಆಡಿದ ಮೃದುವಾದ ಮಾತುಗಳನ್ನು ಕೇಳಿತು. ಬುದ್ಧನು ಅದನ್ನು ಕೈಯಿಂದ ಸವರಿದನು. ಅದರ ರೋಷವೆಲ್ಲ ಮಾಯವಾಯಿತು. ಬುದ್ಧನ ಕಾಲ ಬಳಿ ಮಂಡಿಯೂರಿ, ತನ್ನ ಸೊಂಡಿಲಿನಿಂದ ಆತನ ಕಾಲಿನ ಧೂಳನ್ನು ತೆಗೆದು ತಲೆಯ ಮೇಲೆ ಎರಚಿಕೊಂಡು, ಸಮಾಧಾನದಿಂದ ಗಜಶಾಲೆಗೆ ಹೊರಟುಹೋಯಿತು.

## ೧೩. ಅಂಗುಳಿಮಾಲ

ಅದೇ ಕಾಲದಲ್ಲಿ ಕೋಸಲದ ಬಳಿಯ ಕಾಡಿನಲ್ಲಿ ಒಬ್ಬ ಕಳ್ಳ ಕೊಲೆಗಾರ ನಿದ್ದನು. ಅವನ ಹೆಸರು ಅಂಗುಳಿಮಾಲ. ಅವನು ಆ ಕಾಡಿನಲ್ಲಿದ್ದು, ಅಲ್ಲಿ ಬಂದವರನ್ನು ಕೊಂದು, ಅವರ ಬೆರಳುಗಳನ್ನು ಮಾಲೆಮಾಡಿ ಹಾಕಿಕೊಳ್ಳು ತ್ತಿದ್ದನು. ಅವನಿಗೆ ಯಾರ ಹೆದರಿಕೆಯೂ ಇರಲಿಲ್ಲ. ಹಿಡಿಯಬೇಕೆಂದರೆ ಯಾರ ಕೈಗೂ ಸಿಕ್ಕುತ್ತಿರಲಿಲ್ಲ. ಕಾಡಿನಲ್ಲಿ ಕಾಣದಹಾಗೆ ಮರೆಸಿಕೊಳ್ಳುತ್ತಿದ್ದನು. ಅವನಿಂದ ಜನರಿಗೆ ಆಗುತ್ತಿದ್ದ ಹಾನಿ ಬುದ್ಧನಿಗೆ ತಿಳಿಯಿತು. ಅಂಗುಳಿಮಾಲನ ಆ ಕೆಟ್ಟ ಚಾಳಿಯನ್ನು ಬಿಡಿಸುತ್ತೇನೆಂದು ಬುದ್ಧನು ಕೋಸಲದ ಕಾಡಿಗೆ ಹೊರಟನು. ಹೋಗಬೇಡವೆಂದು ಎಲ್ಲರೂ ಕೇಳಿಕೊಂಡರು. ಆದರೆ ಬುದ್ಧನು ಅವರ ಮಾತುಗಳಿಗೆ ಹೆದರಲಿಲ್ಲ. ಹಿಂದೆ ಉರುವೇಲದ ಕಾಡಿನಲ್ಲಿದ್ದಾಗಲೇ ಹೆದರಿಕೆ ಹಾರಿಹೋಗಿತ್ತು. ಬುದ್ಧನು ಕೋಸಲದ ಕಾಡಿಗೆ ನಡೆದೇ ನಡೆದನು. ಆತನ ಕೆಚ್ಚೆದೆಯನ್ನು ಕಂಡು ಅಂಗುಳಿಮಾಲನಿಗೆ ರೇಗಿತು. ಬುದ್ಧನನ್ನು ಕೊಲ್ಲಲು ಕತ್ತಿಯನ್ನು ಮೇಲೆತ್ತಿದನು. ಆದರೆ, ಬುದ್ಧನ ಶಾಂತವಾದ ಮುಖವನ್ನು ಕಂಡು, ಆತನ ಪ್ರೀತಿಯ ಮಾತು ಕೇಳಿ, ಅವನ ಕೈ ತಡೆಯಿತು. ಅವನ ಕೋಪ ತಣ್ಣಗಾಯಿತು. ಕೊಲ್ಲಲು ಮನಸ್ಸು ಬರಲಿಲ್ಲ. ಆಗ ಬುದ್ಧನು ಅವನನ್ನು ಪ್ರೇಮದಿಂದ ಮಾತನಾಡಿಸುತ್ತ, ಕೊಲೆಯಿಂದ ಆಗುವ ಕೇಡನ್ನೆಲ್ಲ

ವಿವರವಾಗಿ ತಿಳಿಸಿದನು. ಆ ಬುದ್ಧವಾಣಿಯನ್ನು ಕೇಳುತ್ತ, ಅಂಗುಳಿಮಾಲನ ಅಜ್ಞಾನ ಮರೆಯಾಯಿತು. ಕೈಯಲ್ಲಿದ್ದ ಕತ್ತಿಯನ್ನು ಬಿಸುಟು, ಪಶ್ಚಾತ್ತಾಪ ಪಡುತ್ತ ತನ್ನ ಪಾಪವನ್ನು ಒಪ್ಪಿಕೊಂಡನು, ಬುದ್ಧನ ಧರ್ಮಕ್ಕೆ ಶರಣಾಗಿ ಭಿಕ್ಷುವಾದನು. ಯಾರುಯಾರಿಗೂ ಸಗ್ಗದಿದ್ದ ಅಂಗುಳಿಮಾಲನು ಬುದ್ಧನ ಒಳ್ಳೆಯ ಮಾತಿನಿಂದ ಸಾಧುವಾದುದನ್ನು ಕಂಡು, ಎಲ್ಲರಿಗೂ ಆಶ್ಚರ್ಯವಾಯಿತು. ಬುದ್ಧನ ಶಕ್ತಿಯನ್ನು ಎಲ್ಲರೂ ಕೊಂಡಾಡಿದರು.

## ೧೪. ಬಡವಿಯ ಭಕ್ತಿ

ಒಂದು ಸಲ, ಬುದ್ಧನು ರಾಜಗೃಹದ ವೇಣುವನದಲ್ಲಿ ತಂಗಿದ್ದನು. ಅನೇಕ ಜನ ಆತನ ಬಳಿಗೆ ಬಂದು, ಬೇಕುಬೇಕಾದ ಹಾಗೆ ಬೆಲೆಯುಳ್ಳ ವಸ್ತುಗಳನ್ನು ಸಮರ್ಪಿಸಿ ಹೋಗುತ್ತಿದ್ದರು. ರಾಜಗೃಹದಲ್ಲಿ ಒಬ್ಬ ಬಡ ಹೆಂಗಸು ಇದ್ದಳು. ಆಕೆ ಬುದ್ಧನನ್ನು ಕಂಡಾಗಿನಿಂದ ಆತನನ್ನು ಪ್ರೀತಿಸಿ ಗೌರವಿಸುತ್ತಿದ್ದಳು. ಆದರೆ ಬುದ್ಧನಿಗೆ ಏನನ್ನಾದರೂ ಸಮರ್ಪಿಸಬೇಕೆಂದರೆ, ಆಕೆಯ ಹತ್ತಿರ ಕಾಸೂ ಇರಲಿಲ್ಲ. "ಬುದ್ಧನಿಗೆ ನಿವೇದಿಸಲು ಏನಾದರೂ ತರಬೇಕೆಂದರೆ ನಾನು ಬಡವಿ. ಒಂದು ಹಿಡಿ ಅನ್ನವನ್ನಾದರೂ ಮಾಡಿ ಒಬ್ಬ ಭಿಕ್ಷುವಿಗೆ ಹಾಕುವೆನು" ಎಂದುಕೊಂಡಳು. ಅದಕ್ಕಾಗಿ, ಬೆಳಗ್ಗೆ ಅಷ್ಟು ಹೊತ್ತಿಗೇ ಎದ್ದು, ಭಿಕ್ಷೆಬೇಡುತ್ತ ಮನೆಮನೆಗೂ ಹೋದಳು. ಮಧ್ಯಾಹ್ನದ ವೇಳೆಗೆ ಅಕ್ಕಿಗೆ ಸಾಕಾದಷ್ಟು ಹಣ ಸಿಕ್ಕಿತು. ಅಕ್ಕಿ ತಂದು ಅನ್ನ ಮಾಡಿದಳು. ಯಾವನಾದರೂ ಭಿಕ್ಷು ಬಂದಾನೆಂದು ಆ ಅನ್ನವನ್ನು ಇಟ್ಟುಕೊಂಡು ಕಾಯುತ್ತ ಕುಳಿತಳು. ಹಗಲು ಕಳೆದು ಸಂಜೆಯಾದರೂ ಯಾರೂ ಆ ಕಡೆ ಬರಲೇ ಇಲ್ಲ. ಆ ಬಡವಿಗೆ ಬಹಳ ದುಃಖವಾಯಿತು. ಬುದ್ಧನಿಗೆ ಹೇಗೆ ಸೇವೆ ಸಲ್ಲಿಸುವುದೆಂದು ಚಿಂತಿಸಿದಳು. ಅಕ್ಕಿಯನ್ನು ಕೊಂಡುಕೊಂಡ ಮೇಲೆ ಒಂದೆರಡು ಪುಡಿಕಾಸು ಉಳಿದಿತ್ತು. ಬುದ್ಧನ ವಿಹಾರದಲ್ಲಿದ್ದ ಹಣತೆಗೆ ಹಾಕಬೇಕೆಂದು ಆ ಪುಡಿಕಾಸಿಗೆ ಎಣ್ಣೆ ಕೊಂಡುಕೊಂಡು ಹೋದಳು. ವಿಹಾರದಲ್ಲಿ ಸಾವಿರಾರು ದೀಪಗಳು ಪ್ರಕಾಶಮಾನವಾಗಿ ಉರಿಯುತ್ತಿದ್ದುವು. ಆ ಬಡವಿಯ ಹತ್ತಿರ ಇದ್ದ ಎಣ್ಣೆ ಒಂದು ಚಿಕ್ಕ ಹಣತೆಗೂ ಸಾಲುತ್ತಿರಲಿಲ್ಲ. ಅದಕ್ಕಾಗಿ ಆಕೆ ಬಹಳ ನಾಚಿಕೊಂಡು,

ಯಾರ ಕಣ್ಣಿಗೂ ಬೀಳದ ಹಾಗೆ ವಿಹಾರದ ಒಳಕ್ಕೆ ಹೋದಳು. ಒಂದು ಸಣ್ಣ ಹಣತೆಗೆ ಆ ಎಣ್ಣೆಯನ್ನು ತುಂಬಿ, ಅದರಲ್ಲಿ ಒಂದು ಸಣ್ಣ ಬತ್ತಿ ಹಾಕಿ ಹತ್ತಿಸಿದಳು. ಬುದ್ಧನ ಅನುಗ್ರಹವನ್ನು ಮನಸ್ಸಿನಲ್ಲಿಯೇ ಬೇಡುತ್ತ ಮನೆಗೆ ಹೋದಳು.

ರಾತ್ರಿ ಒಂದು ಹೊತ್ತಿನಲ್ಲಿ ಗಾಳಿ ಬಲವಾಗಿ ಬೀಸಿತು. ಆ ಗಾಳಿಯ ರಭಸಕ್ಕೆ ವಿಹಾರದಲ್ಲಿದ್ದ ದೀಪಗಳೆಲ್ಲ ಆರಿಹೋದುವು. ಆದರೆ ಆ ಬಡವಿ ಹತ್ತಿಸಿಟ್ಟ ಪುಟ್ಟ ಹಣತೆ ಮಾತ್ರ ಅದಿರದೆ ಉರಿಯುತ್ತಿತ್ತು. ಆ ವಿಷಯವನ್ನು ತಿಳಿದು ಭಿಕ್ಷುಗಳೆಲ್ಲರೂ ಆಶ್ಚರ್ಯಪಟ್ಟರು. ಬುದ್ಧನನ್ನು ಕುರಿತು "ಉಳಿದ ಎಲ್ಲರೂ ಹತ್ತಿಸಿಟ್ಟ ದೊಡ್ಡ ದೊಡ್ಡ ಸೊಡರುಗಳು ಗಾಳಿಗೆ ಆರಿಹೋದರೂ, ಈ ಪುಟ್ಟ ಹಣತೆ ಮಾತ್ರ ಇನ್ನೂ ಉರಿಯುತ್ತಿರುವುದಲ್ಲ!" ಎಂದರು. ಬುದ್ಧನು "ಈ ಹಣತೆಯನ್ನು ಹತ್ತಿಸಿದ ಬಡವಳ ಮನಸ್ಸು ಪರಿಶುದ್ಧವಾದುದು. ಆಕೆ ನನ್ನಲ್ಲಿ ಇಟ್ಟಿರುವ ಪ್ರೀತಿ ಗೌರವಗಳು ಅಪಾರವಾದುವು. ಆದ್ದರಿಂದ ಈ ಹಣತೆಯನ್ನು ಆರಿಸುವುದು ಸುಲಭವಲ್ಲ" ಎಂದನು. ಆ ಬಡವಳ ಭಕ್ತಿಗೆ ಮೆಚ್ಚಿ ಅವಳನ್ನು ಕರೆಸಿ, ಆಕೆಗೆ ಉಪದೇಶ ಮಾಡಿದನು. ಆಕೆ ಭಿಕ್ಷುಣಿಯಾಗಿ ಸಂಘಕ್ಕೆ ಸೇರಿದಳು.

## ೧೫. ಭಗವಂತನ ಮಹಾಕರುಣೆ

ಬುದ್ಧನಿಗೆ 'ಮಹಾ ಕಾರುಣಿಕ' ಎಂಬ ಬಿರುದು ಇತ್ತೆಂದು ಮೊದಲೇ ಹೇಳಿದೆ. ಆತನ ಮಹಾಗುಣಗಳಲ್ಲಿ ಈ ಕರುಣೆಯೂ ಒಂದು ದೊಡ್ಡಗುಣ. ಚಿಕ್ಕವನಾಗಿರುವಾಗ, ದೇವದತ್ತನು ಹೊಡೆದ ಹಂಸಪಕ್ಷಿಗೆ ಆರೈಕೆ ಮಾಡಿ, ಅದನ್ನು ಹೇಗೆ ಬದುಕಿಸಿದನೆಂಬುದನ್ನು ನೋಡಿದ್ದೇವೆ. ಸುಗ್ಗಿಯ ಹಬ್ಬದ ಸಂದರ್ಭದ ಕತೆಯನ್ನು ಕೇಳಿದ್ದೇವೆ. ಬಿಂಬಿಸಾರನ ಯಜ್ಞವನ್ನು ನಿಲ್ಲಿಸಿದುದರಿಂದ ಜೀವಜಂತುಗಳ ಮೇಲೆ ಆತನಿಗಿದ್ದ ಕರುಣೆ ವ್ಯಕ್ತವಾಗುತ್ತದೆ. ಮನುಷ್ಯರ ಮೇಲೆ ಆತನಿಗಿದ್ದ ಕರುಣೆಯಂತೂ ಹೇಳತೀರದು. ಆ ಕರುಣೆ ಇದ್ದುದರಿಂದಲೇ, "ಜಾತಿ ಕುಲ ಗೋತ್ರಗಳು ಏನಾದರೂ ಇರಲಿ. ನಡತೆಯೊಂದು ಚೆನ್ನಾಗಿದ್ದರೆ ಅಂತಹವರು ಬಂದು ಈ ಧರ್ಮವನ್ನು ಸೇರ

ಬಹುದು'' ಎಂದು ಎಲ್ಲರನ್ನೂ ಆತನು ಕರೆದುಕೊಂಡನು. ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರು ಮಾತ್ರವಲ್ಲದೆ ಚಂಡಾಲರಿಗೆ ಕೂಡ ಆತನ ಸಂಘದಲ್ಲಿ ಸ್ಥಳ ಸಿಕ್ಕಿತು. ''ಎಲ್ಲರೂ ಈ ಧರ್ಮವನ್ನು ತಿಳಿದುಕೊಂಡು ಉತ್ತಮರಾಗಲಿ'' ಎಂಬ ಕರುಣೆಯೇ ಅದಕ್ಕೆ ಕಾರಣ.

ಬುದ್ಧನ ಮೊತ್ತಮೊದಲಿನ ಶಿಷ್ಯರಾದ ತ್ರಪುಷ ಭಲ್ಲುಕ ಎಂಬವರು ವ್ಯಾಪಾರಿಗಳು. ಉರುವೇಲದಲ್ಲಿ ಆತನ ಶಿಷ್ಯರಾದವರು ಬ್ರಾಹ್ಮಣರು. ಆನಂದ ದೇವದತ್ತರು ಕ್ಷತ್ರಿಯರು. ಸಾರಿಪುತ್ರ ಮೌದ್ಗಲ್ಯಾಯನರು ಬ್ರಾಹ್ಮಣರು. ಬಿಂಬಿಸಾರನೂ ಪ್ರಸೇನಜಿತನೂ ರಾಜರು. ಮಾಂಡಳಿಕರಾದ ಸುನೀಥ, ವರ್ಷಕಾರ ಎಂಬವರೂ, ಸಿಂಹ ಮೊದಲಾದ ಸೇನಾಧಿಪತಿಗಳೂ ಬುದ್ಧನ ಶಿಷ್ಯರು. ಬುದ್ಧನಿಗೆ ಮೆಚ್ಚಿನ ಶಿಷ್ಯರಾದ ಪೂರ್ಣ, ಪೂರ್ಣಿಕಾ ಎಂಬವರು ಗುಲಾಮರ ಹೆಂಗಸರು. ಬುದ್ಧನಿಗೆ ಕಡೆಯ ಊಟವಿಕ್ಕಿದ ಚುಂದ ಕಮ್ಮಾರ. ಅಂಗುಳಿ ಮಾಲ ಕೊಲೆಗಾರ. ಆಮ್ರಪಾಲಿ ವೇಶ್ಯೆ. ಬುದ್ಧನು ಸತ್ತುಹೋದ ಮೇಲೆ, ಆತನ ಮತಗ್ರಂಥವಾದ 'ವಿನಯ'ವನ್ನು ಸಂಪಾದಿಸಿದ ಉಪಾಲಿ ಕ್ಷೌರಿಕ. ಬುದ್ಧನಿಂದ ಉದ್ಧರಿಸಲ್ಪಟ್ಟ ಸುನೀತ ಎಂಬವನು ಜಲಗಾರ. ಆತನು ತನ್ನ ಉದ್ಧಾರವನ್ನು ತಾನೇ ಹೀಗೆ ಹೇಳಿಕೊಂಡಿದ್ದಾನೆ: ''ನಾನು ಕೀಳು ಕುಲದಲ್ಲಿ ಹುಟ್ಟಿ ಬಡವನಾಗಿದ್ದೆ. ನಾನು ಬೀದಿ ಗುಡಿಸುವ ಕೆಲಸ ಮಾಡುತ್ತಿದ್ದೆ. ನನ್ನನ್ನು ಯಾರೂ ಲಕ್ಷಿಸುತ್ತಿರಲಿಲ್ಲ. ಎಲ್ಲರೂ ನಿಕೃಷ್ಟವಾಗಿ ಕಾಣುತ್ತಿದ್ದರು. ಜನರು ಆಡಿದ ಮಾತಿಗೆ ನೊಂದು, ಮನಸ್ಸು ಮುದುರಿಕೊಂಡು ತಲೆ ತಗ್ಗಿಸಿ ಕೊಳ್ಳುತ್ತಿದ್ದೆ. ಒಂದು ದಿನ ಸರ್ವಜ್ಞನಾದ ಬುದ್ಧಗುರು ತನ್ನ ಭಿಕ್ಷುಗಳೊಡನೆ ಬರುತ್ತಿದ್ದನು. ಮಹಾಜಿನನು ಮಗಧದ ಮುಖ್ಯಪಟ್ಟಣವನ್ನು ಹೊಗುವುದು ನನ್ನ ದೃಷ್ಟಿಗೆ ಬಿತ್ತು. ನನ್ನ ಬುಟ್ಟಿ ಪೊರಕೆಗಳನ್ನು ಅತ್ತ ಇಟ್ಟು, ನಮಸ್ಕರಿಸ ಬೇಕೆಂದು ದೂರದಲ್ಲಿಯೇ ನಿಂತೆ. ಆಗ ಲೋಕಪೂಜ್ಯನು, ನನ್ನ ಮೇಲಿನ ಕರುಣೆಯಿಂದ ಹಾಗೆಯೇ ದಾರಿಯಲ್ಲಿ ನಿಂತನು. ಆತನ ಪಾದಕ್ಕೆ ನಾನು ತಗ್ಗಿ ಬಗ್ಗಿದೆ. ಬಳಿಯಲ್ಲಿ ನಿಂತು, ಪರಮನ ಪರಿವಾರಕ್ಕೆ ನನ್ನನ್ನೂ ಸೇರಿಸಿಕೊಳ್ಳ ಬೇಕೆಂದು ಬೇಡಿಕೊಂಡೆ. ಆಗ, ತನ್ನ ಕರುಣೆಯಿಂದ ಲೋಕಗಳನ್ನು ಕಾಪಾಡ ತಕ್ಕ ಆ ಮಹಾಕಾರುಣಿಕನು 'ಬಾ ಭಿಕ್ಷು!' ಎಂದು ಕರೆದನು. ಆ ದಿನದಿಂದ ನಾನು ಸಂಘಕ್ಕೆ ಸೇರಿದೆ.''

ಬುದ್ಧನು ಇನ್ನೂ ಎಷ್ಟೋ ಜನರನ್ನು ಹೀಗೇ ಉದ್ಧಾರ ಮಾಡಿದನು. "ಬೆಲೆ ಜನ್ಮದಿಂದ ಬರುವುದಿಲ್ಲ. ನಡತೆಯಿಂದ ಬೆಲೆ ಬರುತ್ತದೆ" ಎಂದು ಸಾರಿ ಸಾರಿ ಹೇಳಿದನು. ಆ ಜಾತಿ ಈ ಜಾತಿ ಎನ್ನದೆ ಎಲ್ಲರಿಗೂ ತನ್ನ ಧರ್ಮವನ್ನು ಹೇಳಿಕೊಟ್ಟನು. "ಭಿಕ್ಷುಗಳೇ! ಗಂಗಾ, ಯಮುನಾ, ಅಚಿರವತೀ, ಸರಭೂ, ಮಹೀ ಅಥವಾ ಯಾವ ನದಿಯೇ ಆಗಲಿ, ಮಹಾ ಸಮುದ್ರವನ್ನು ಸೇರಿದಾಗ ತನ್ನ ಮೊದಲಿನ ಹೆಸರನ್ನು ಕಳೆದುಕೊಂಡು, 'ಸಮುದ್ರ' ಎಂಬ ಒಂದೇ ಹೆಸರನ್ನು ಹೊಂದುವುದು. ಹಾಗೆಯೇ, ನನ್ನ ಶಿಷ್ಯರು, ಬ್ರಹ್ಮ ಕ್ಷತ್ರ ವೈಶ್ಯ ಶೂದ್ರ ಯಾರೇ ಆಗಲಿ, ಬುದ್ಧನ ಧರ್ಮವನ್ನು ಅನುಸರಿಸಿದರೆ, ತಮ್ಮ ಹಳೆಯ ಹೆಸರು ವಂಶಗಳನ್ನು ನೀಗಿಕೊಂಡು 'ಭಿಕ್ಷುಗಳು' ಎಂಬ ಒಂದೇ ಹೆಸರನ್ನು ಪಡೆಯುವರು" ಎಂಬುದು ಬುದ್ಧನ ಮಾತು.

## ೧೬. ಭಗವಂತನ ದಿನಚರ್ಯೆ

ಬುದ್ಧನು ಪ್ರತಿದಿನವೂ ಬೆಳಗ್ಗೆ ಐದು ಗಂಟೆಗೆ ಎದ್ದು ಸ್ನಾನಾದಿಗಳನ್ನು ಮುಗಿಸುವನು. ಮುಂದೆ ಎಲ್ಲಿಗೂ ಹೋಗದೆ ಇದ್ದ ಕಡೆಯೇ ಇರುವುದಾದರೆ, ಭಿಕ್ಷೆಗೆ ಹೋಗುವ ವೇಳೆ ಬರುವವರೆಗೂ ಒಂಟಿಯಾಗಿರುವನು. ಬೇರೆ ಊರಿಗೆ ಹೋಗುವುದಾದರೆ, ದಿನಕ್ಕೆ ಎಂಟು ಹತ್ತು ಮೈಲಿ ನಡೆಯುವನು. ಕೆಲವು ಸಲ, ಯಾರಾದರೂ ಭಕ್ತರು ಆತನನ್ನು ಮಧ್ಯಾಹ್ನದ ಊಟಕ್ಕೆ ಮನೆಗೆ ಕರೆಯುವರು. ಕರೆಯದೆ ಇದ್ದ ದಿವಸ ತಾನೇ ಭಿಕ್ಷೆಗೆ ಹೊರಡುವನು. ಮನೆಯಿಂದ ಮನೆಗೆ ಹೋಗಿ, ಊಟಕ್ಕೆ ಬೇಕಾದಷ್ಟನ್ನು ಮಾತ್ರ ಪಡೆದು, ಸೂರ್ಯನು ನಡುನೆತ್ತಿಯನ್ನು ಬಿಡುವ ವೇಳೆಗೆ ಹಿಂದಿರುಗುವನು. ಊಟಕ್ಕೆ ಕರೆದರೆ, ಊಟವಾದ ಮೇಲೆ ಮನೆಯವರಿಗೆ ತನ್ನ ಧರ್ಮವನ್ನು ತಿಳಿಸುವನು. ತಾನೇ ಭಿಕ್ಷೆ ತಂದರೆ, ತಂಗಿದ್ದ ಸ್ಥಳಕ್ಕೆ ಬಂದು ಅದನ್ನು ತಿನ್ನುವನು. ಅನಂತರ ಶಿಷ್ಯರಿಗೆ ಉಪದೇಶ ಮಾಡುವನು, ಅವರ ಸಂದೇಹಗಳನ್ನು ಹೋಗಲಾಡಿಸುವನು. ಅಪರಾಹ್ನವಾದ ಮೇಲೆ, ಮುಂದೆ ಎಲ್ಲಿಗಾದರೂ ಹೋಗುವುದಿದ್ದರೆ ಅಲ್ಲಿಗೆ ನಡೆಯುವನು. ನಿಂತಲ್ಲಿಯೇ ನಿಲ್ಲುವುದಾದರೆ, ಮರಗಳ ಕೆಳಗೆ ಸಭೆ ಸೇರುವುದು. ಅಕ್ಕಪಕ್ಕದ ಹಳ್ಳಿಗಳಿಂದ ಜನರು ಹೂಗಳನ್ನು ತಂದು ಸಮರ್ಪಿಸುವರು. ಶಿಷ್ಯರು ಯಾರಾದರೂ

ಧರ್ಮಸಂಶಯಗಳನ್ನು ಕೇಳುವರು. ಬುದ್ಧನು ಅವರಿಗೆ ಉತ್ತರಕೊಡುವನು. ಇಳಿಹೊತ್ತಿಗೆ ಸಭೆ ಮುಗಿಯುವುದು. ಅನಂತರ ಬುದ್ಧನು ಪುನಃ ಸ್ನಾನ ಮಾಡುವನು. ಆಮೇಲೆ ಶಿಷ್ಯರೊಡನೆ ಸಂಭಾಷಣೆ ಜರುಗುವುದು. ಈ ಸಂಭಾಷಣೆ ಎಷ್ಟೋ ಸಲ ರಾತ್ರಿಯೆಲ್ಲ ನಡೆದರೂ ನಡೆಯುವುದು.

ಈ ತೆರವ ದಿನಚರಿಯನ್ನು, ತನ್ನ ನಲವತ್ತೈದು ವರುಷಗಳ ಪ್ರಚಾರ ಕಾಲದಲ್ಲಿ ಬುದ್ಧನು ಪಾಲಿಸುತ್ತಿದ್ದನು.

## ೧೭. ಭಗವಂತನ ಕೊನೆಯ ದಿನಗಳು

ಬುದ್ಧನಿಗೆ ಸುಮಾರು ಎಂಬತ್ತು ವರ್ಷವಾದಾಗ, ಆತನು ರಾಜಗೃಹದ ಗೃಧ್ರಕೂಟದಲ್ಲಿ ತಂಗಿದ್ದನು. ಅದೇ ಕಾಲದಲ್ಲಿ ಅಜಾತಶತ್ರು ಪಕ್ಕದ ವಜ್ಜಿಯರ ಮೇಲೆ ದಂಡೆತ್ತಿ ಹೋಗಬೇಕೆಂದು ಯೋಚಿಸಿದನು. ಆ ಯುದ್ಧ ಮಾಡುವ ಸಂದರ್ಭದಲ್ಲಿ ಬುದ್ಧನ ಸಲಹೆಯನ್ನು ಕೇಳಿಕೊಂಡು ಬರಲು ತನ್ನ ಮಂತ್ರಿಯನ್ನು ಕಳುಹಿಸಿದನು. ಬುದ್ಧನು ಆ ಮಂತ್ರಿಯಿಂದ ಎಲ್ಲಾ ವಿಚಾರಗಳನ್ನೂ ತಿಳಿದು, " ಮಂತ್ರಿ! ವಜ್ಜಿಯರು ಗುಣವಂತರು, ಧರ್ಮಾತ್ಮರು. ಅವರು ಒಗ್ಗಟ್ಟನಿಂದ ಒಂದಾಗಿದ್ದಾರೆ. ಅವರು ಗುಣವಂತರಾಗಿರುವ ವರೆಗೆ, ಅವರು ಧರ್ಮಾತ್ಮರಾಗಿರುವ ವರೆಗೆ, ಅವರು ಒಟ್ಟಾಗಿರುವ ವರೆಗೆ, ಅವರನ್ನು ಯಾರೂ ಜಯಿಸಲಾರರು " ಎಂದನು. ಅದನ್ನು ಕೇಳಿ, ಅಜಾತಶತ್ರು ಯುದ್ಧದ ಯೋಚನೆ ಬಿಟ್ಟುಬಿಟ್ಟನು. ಯುದ್ಧ ನಡೆದು ರಕ್ತದ ಕಾಲುವೆ ಹರಿಯುವುದು ತಪ್ಪಿತು.

ಅಲ್ಲಿಂದ ಮುಂದೆ, ಬುದ್ಧನು, ಶಿಷ್ಯರನ್ನು ಕರೆದುಕೊಂಡು ನಾಲಂದಕ್ಕೆ ಹೊರಟನು. ನಾಲಂದದಿಂದ ಪಾಟಲಿಗ್ರಾಮಕ್ಕೆ ಹೋದನು. ಮುಂದೆ ನಡೆಯುವುದನ್ನು ತನ್ನ ದಿವ್ಯದೃಷ್ಟಿಯಿಂದ ಕಂಡುಕೊಂಡು, " ಈ ಪಾಟಲಿಗ್ರಾಮವು ಕಾಲಾನುಕಾಲದಲ್ಲಿ ಪಾಟಲೀಪುತ್ರವೆಂಬ ಮಹಾನಗರವಾಗುವುದು " ಎಂದನು. ಆ ಮಾತು ಸುಳ್ಳಾಗಲಿಲ್ಲ. ಮುಂದೆ ಗಂಗೆಯನ್ನು ದಾಟಿ, ಕೋಟಿಗ್ರಾಮ, ನಾದಿಕಾ ಮುಂತಾದ ಕಡೆಗಳಲ್ಲಿ ಧರ್ಮವನ್ನು ಸಾರುತ್ತ, ವೈಶಾಲಿಗೆ ಹೋಗಿ, ಅಲ್ಲಿಯ ಆಮ್ರವನದಲ್ಲಿ ತಂಗಿದನು.

ಆ ಆಮ್ರವನವನ್ನು ಆಮ್ರಪಾಲಿಯು ಬುದ್ಧನಿಗೆ ದಾನಮಾಡಿದ್ದಳು. ಆಕೆ ಬುದ್ಧನ ಶಿಷ್ಯಳು. ಬುದ್ಧನು ಆಮ್ರವನಕ್ಕೆ ಬಂದುದು ಆಕೆಗೆ ತಿಳಿಯಿತು. ಅದೇ ಕ್ಷಣವೇ ಆಕೆ ಅಲ್ಲಿಗೆ ಬಂದಳು. ಬುದ್ಧನ ಉಪದೇಶ ಮುಗಿದಮೇಲೆ, ಮಾರನೆಯ ದಿನದ ಭಿಕ್ಷೆಗೆ ತನ್ನ ಮನೆಗೆ ಬರಬೇಕೆಂದು ಆತನನ್ನು ಪ್ರಾರ್ಥಿಸಿಕೊಂಡಳು. ಬುದ್ಧನೂ ಒಪ್ಪಿಕೊಂಡನು. ಆಮ್ರಪಾಲಿ ಹೊರಟುಹೋದ ಕೊಂಚ ಹೊತ್ತಿನಲ್ಲಿಯೇ ಲಿಚ್ಛವಿಯ ಅರಸರು ಬಂದು, ಮಾರನೆಯ ದಿನದ ಊಟಕ್ಕೆ ಬುದ್ಧನನ್ನು ತಮ್ಮ ಮನೆಗೆ ಕರೆದರು. ಬುದ್ಧನಿಗೆ ಎಲ್ಲ ಶಿಷ್ಯರಲ್ಲಿಯೂ ಒಂದೇ ಸಮನಾದ ಪ್ರೀತಿಯಿತ್ತು. ಆದುದರಿಂದಲೇ, ಲಿಚ್ಛವಿಯ ಅರಸರು ಕರೆದರೆಂದು ವೇಶ್ಯೆಯಾದ ಆಮ್ರಪಾಲಿಯ ಔತಣವನ್ನು ಬಿಟ್ಟುಬಿಡಲಿಲ್ಲ. ಆಮ್ರಪಾಲಿಗೆ ಮೊದಲೇ ಕೊಟ್ಟಿದ್ದ ಮಾತನ್ನು ತಿಳಿಸಿ, ಲಿಚ್ಛವಿಗಳನ್ನು ಕಳುಹಿಸಿ ಕೊಟ್ಟನು.

ವೈಶಾಲಿಯಿಂದ ಹೊರಟ ಬುದ್ಧನು, ತನ್ನ ಕಡೆಯ ವರ್ಷಾಕಾಲವನ್ನು ಬೆಳುವದಲ್ಲಿ ಕಳೆದನು. ಅಲ್ಲಿ ಆತನಿಗೆ ಬಹಳ ಆಲಸ್ಯವಾಯಿತು. ಆ ಆಲಸ್ಯವು ಕಳೆಯುವವರೆಗೆ ಅಲ್ಲಿಯೆ ಇದ್ದು, ಮುಂದೆ ಆನಂದನೊಡನೆ ಮಹಾವನದ ಕೂಟಾಗಾರಕ್ಕೆ ನಡೆದನು. ಅಲ್ಲಿ ಭಿಕ್ಷುಗಳನ್ನೆಲ್ಲ ಕರೆದು, ಅವರಿಗೆ ತನ್ನ ಧರ್ಮವನ್ನು ಒತ್ತಿ ಒತ್ತಿ ಹೇಳಿದನು. ಅದೇ ಕಾಲದಲ್ಲಿ ಸಾರಿಪುತ್ರನೂ ಮೌದ್ಗಲ್ಯಾಯನನೂ ಸತ್ತುಹೋದರು. ಗುರುವಿನ ಜೊತೆಗೆ ಬಹಳವಾಗಿ ಬೆರೆತುಕೊಂಡಿದ್ದ ಶಿಷ್ಯರಲ್ಲಿ ಆನಂದ ಒಬ್ಬ ಮಾತ್ರ ಉಳಿದಿದ್ದನು.

ಬುದ್ಧನು ಕೂಟಾಗಾರದಿಂದ ಪಾವಕ್ಕೆ ಬಂದನು. ಪಾವದಲ್ಲಿ ಒಬ್ಬ ಕಮ್ಮಾರನಿದ್ದ. ಅವನ ಹೆಸರು ಚುಂದ. ಅವನಿಗೆ ಬುದ್ಧನಲ್ಲಿ ವಿಶೇಷವಾದ ಭಕ್ತಿಯಿತ್ತು. ಮಾರನೆಯ ದಿನದ ಭಿಕ್ಷೆಯನ್ನು ಬುದ್ಧನು ತನ್ನ ಮನೆಯಲ್ಲಿ ಸ್ವೀಕರಿಸಬೇಕೆಂದು ಚುಂದನು ಬಯಸಿದನು. ಬುದ್ಧನು ಒಪ್ಪಿಕೊಂಡನು. ಆದರೆ ಆ ದಿನ ಊಟ ಮಾಡಿದುದು ಬುದ್ಧನಿಗೆ ವೈಗಾಗಲಿಲ್ಲ. ಹಿಂದೆ ಬೆಳುವದಲ್ಲಿ ಆದ ಆಲಸ್ಯ ಪುನಃ ಮರುಕೊಳಿಸಿತು. ಹಾಗೆಯೇ ಕೊಂಚ ಚೇತರಿಸಿಕೊಂಡನು. ತನ್ನ ಕಡೆಗಾಲ ಹತ್ತಿರವಾಯಿತೆಂದು ಆತನಿಗೆ ಗೊತ್ತಾಯಿತು. ತನ್ನ ಕಡೆಯ ದಿನಗಳನ್ನು ಕುಶಿನಾರದಲ್ಲಿ ಕಳೆಯಬೇಕೆಂದು ನಿರ್ಧರಿಸಿದನು. ಅದಕ್ಕಾಗಿ ಪಾವವನ್ನು ಬಿಟ್ಟು ಕುಶಿನಾರಕ್ಕೆ ನಡೆದನು. ಹೋಗುವಾಗ

ದಾರಿಯಲ್ಲಿ ಬಹಳ ಆಯಾಸವಾಯಿತು. ಹಾಗೆಯೇ ದಾರಿಯ ಪಕ್ಕದ ಮರಗಳ ಅಡಿಯಲ್ಲಿ ವಿಶ್ರಮಿಸಿಕೊಂಡನು. ಆನಂದನು ಪಕ್ಕದ ನದಿಯಿಂದ ನೀರು ತಂದು ಕುಡಿಸಿದನು. ಆ ಕಾಲಕ್ಕೆ, ಹಿಂದೆ ಬುದ್ಧನ ಗುರುವಾಗಿದ್ದ ಅರಾಡನ ಶಿಷ್ಯನಾದ ಪುಕ್ಕುಸ ಎಂಬವನು ಆ ಮಾರ್ಗವಾಗಿ ಬಂದನು. ಬುದ್ಧನು ತನ್ನ ಆಯಾಸ ವನ್ನು ಕೂಡ ಲಕ್ಷ್ಯಮಾಡದೆ, ಪುಕ್ಕುಸನ ಬಳಿ ಧರ್ಮವನ್ನು ಕುರಿತು ಮಾತನಾಡಿದನು. ಬುದ್ಧನ ಮಾತನ್ನು ಕೇಳಿ ನಂಬಿ ಪುಕ್ಕುಸನೂ ಆತನ ಶಿಷ್ಯನಾದನು.

ಬುದ್ಧನು ಅಲ್ಲಿಂದ ಮುಂದೆ ಹೋಗಿ, ಕಕುತ್ಥ ತೀರ್ಥದಲ್ಲಿ ಸ್ನಾನಮಾಡಿದನು. ಸ್ನಾನಮಾಡಿ ಕುಶಿನಾರಕ್ಕೆ ಬಂದು, ಅಲ್ಲಿಯ ಶಾಲವನದಲ್ಲಿ ಇಳಿದನು. ಆನಂದ ನನ್ನು ಕರೆದು, "ಆನಂದ, ಬಹಳ ಬಳಲಿಕೆಯಾಗುತ್ತಿದೆ. ಈ ಎರಡು ಶಾಲಮರ ಗಳ ನಡುವೆ, ಉತ್ತರದ ಕಡೆಗೆ ತಲೆಮಾಡಿ, ಮಲಗುವುದಕ್ಕೆ ಏನಾದರೂ ಹಾಸುವೆಯ?" ಎಂದು ಕೇಳಿದನು. ಬುದ್ಧನ ಇಚ್ಛೆಯಂತೆ, ಆನಂದನು ಬಟ್ಟೆ ಮಡಿಸಿ ಹಾಸಿ, ಮಲಗುವುದಕ್ಕೆ ಸಿದ್ಧಮಾಡಿಕೊಟ್ಟನು. ಬುದ್ಧನು ಅಲ್ಲಿ ಮಲಗಿಕೊಂಡನು. ಬುದ್ಧನು ಸಾಯುವ ಸ್ಥಿತಿಗೆ ಬಂದುದನ್ನು ಕಂಡು ಆನಂದನಿಗೆ ಬಹಳ ದುಃಖ ಬಂತು. ಹೊರಗಡೆ ಹೋಗಿ ಒಂದು ಮರವನ್ನು ಒರಗಿ ಕೊಂಡು ಅಳುತ್ತ ನಿಂತುಕೊಂಡನು. ಅದು ಬುದ್ಧನಿಗೆ ತಿಳಿಯಿತು. ಆನಂದನನ್ನು ಕರೆದು, ವಿಶ್ವಾಸದಿಂದ ಹತ್ತಿರ ಕುಳ್ಳಿರಿಸಿಕೊಂಡು, "ಆನಂದ! ಅಳಬೇಡ. ದುಃಖವನ್ನು ಕಡಮೆ ಮಾಡಿಕೊ. ನಾನು ಎಷ್ಟು ಸಲ ಹೇಳಿಲ್ಲ, ಆನಂದ, ನಾವು ಪ್ರೀತಿಸುವ ವಸ್ತುಗಳನ್ನು ಒಂದಲ್ಲ ಒಂದು ದಿನ ನಾವು ಬಿಟ್ಟು ಹೋಗ ಬೇಕು ಎಂದು! ಹುಟ್ಟಿದುದು ಎಲ್ಲವೂ ಹಾಳಾಗತಕ್ಕುದೇ, ಆನಂದ! ಅದಕ್ಕಾಗಿ ಅಳಬೇಡ. ನೀನು ನನ್ನಲ್ಲಿ ಪ್ರೀತಿ ವಿಶ್ವಾಸಗಳನ್ನು ಇಟ್ಟು ನಡೆದುಕೊಂಡಿರುವೆ. ಅದರಿಂದ ನಿನಗೆ ಶ್ರೇಯಸ್ಸಾಗುವುದು" ಎಂದು ಆತನನ್ನು ಸಮಾಧಾನಪಡಿ ಸಿದನು. ಆನಂದನ ಮನಸ್ಸನ್ನು ಬೇರೆ ಕಡೆಗೆ ತಿರುಗಿಸಿ, ಆತನ ದುಃಖವನ್ನು ಮರೆಸಲು, "ಆನಂದ! ಹೋಗಿ ಕುಶಿನಾರದ ಮಲ್ಲರನ್ನು ಕರೆದುಕೊಂಡು ಬಾ" ಎಂದು ಆತನನ್ನು ಕಳುಹಿಸಿದನು. ಬಂದ ಮಲ್ಲರನ್ನು ಮಾತನಾಡಿಸಿ ಕಳುಹಿಸುವ ವೇಳೆಗೆ ರಾತ್ರಿ ಒಂದು ಜಾವವಾಯಿತು. ಬುದ್ಧನು ದೇಹವನ್ನು ಬಿಡುವುದಕ್ಕೆ ಸಿದ್ಧನಾಗುತ್ತಿದ್ದನು.

ಆ ಹೊತ್ತಿಗೆ ಸುಭದ್ರನೆಂಬ ಬ್ರಾಹ್ಮಣನು ಬುದ್ಧನನ್ನು ಹುಡುಕಿಕೊಂಡು ಬಂದನು. ಆನಂದನು ಅವನನ್ನು ಕಂಡು, "ಬುದ್ಧನಿಗೆ ಈ ದಿನ ಬಹಳ ಆಯಾಸವಾಗಿದೆ. ಆತನನ್ನು ಈಗ ತೊಂದರೆಪಡಿಸುವುದು ಸರಿಯಲ್ಲ" ಎಂದು ತಡೆದನು. ಅವರು ಆಡುತ್ತಿದ್ದ ಮಾತು ಬುದ್ಧನ ಕಿವಿಗೆ ಬಿತ್ತು. ಬುದ್ಧನು ಅಷ್ಟು ಆಯಾಸವಾಗಿದ್ದರೂ, ಸುಭದ್ರನನ್ನು ಬಳಿಗೆ ಕರೆದನು. ಅವನ ಧರ್ಮ ಸಂಶಯಗಳನ್ನು ವಿಚಾರಿಸಿ, ಅದಕ್ಕೆ ಉತ್ತರವಾಗಿ "ಸುಭದ್ರ! ಯಾವ ಧರ್ಮದಲ್ಲಿ ಸತ್ಯ, ದಯೆ, ಪ್ರೇಮ, ಕರುಣೆಗಳು ಇರುವುವೋ ಅದೇ ಉತ್ಕೃಷ್ಟವಾದ ಧರ್ಮ" ಎಂದನು. ಹೀಗೆ ಧರ್ಮವನ್ನು ಕುರಿತು, ಸುಭದ್ರನ ಹತ್ತಿರ ಒಂದು ಯಾಮದ ಹೊತ್ತು ಮಾತನಾಡಿದನು. ತನ್ನ ಶಿಷ್ಯರಿಗೆ ಏನಾದರೂ ಸಂದೇಹಗಳು ಉಂಟೋ ಎಂದು ಕೇಳಿದನು. ತಾನು ಅವರಿಗೆ ಹೇಳಿ ಕೊಟ್ಟಿದ್ದ ಧರ್ಮವನ್ನು ಮತ್ತೆಯೂ ಅವರಿಗೆ ಒತ್ತಿಹೇಳಿ, ಸಮಾಧಾನದಿಂದ ಮೃತನಾದನು.

## ೧೮. ಬುದ್ಧವಾಣಿ

ಬುದ್ಧನು ಮರಣಹೊಂದಿದನು. ಆತನು ಸತ್ತು ಎರಡೂವರೆ ಸಾವಿರ ವರ್ಷಗಳಾದರೂ, ಆತನನ್ನು ಯಾರೂ ಮರೆತಿಲ್ಲ, ಮರೆಯುವ ಹಾಗೂ ಇಲ್ಲ. ಬುದ್ಧನು ಸತ್ತುಹೋದರೂ ಆತನು ಆಡಿದ ಮಾತು ಸತ್ತಿಲ್ಲ, ಅವು ಸಾಯುವುದೂ ಇಲ್ಲ. ಆ ಬುದ್ಧವಾಣಿಯ ಬಲವಷ್ಟು! ಅದು ಈಗ ಕೂಡ, ಜಗತ್ತಿನ ಗುಹೆಯಲ್ಲಿ ಸಿಂಹನಾದದ ಹಾಗೆ ಧ್ವನಿ ಮಾಡುತ್ತಿದೆ. ಬುದ್ಧನು ಬದುಕಿದ್ದಾಗ ಆಡುತ್ತಿದ್ದ ಮಾತುಗಳಲ್ಲಿ ಕೆಲವನ್ನು ನೆನಪಿಗೆ ತಂದುಕೊಳ್ಳೋಣ :

"ವೈರದಿಂದ ವೈರ ಶಾಂತವಾಗುವುದಿಲ್ಲ. ಪ್ರೇಮದಿಂದ ವೈರ ಶಾಂತವಾಗುವುದು. ಇದು ಸನಾತನ ಧರ್ಮ."

"ಇತರರ ಲೋಪದೋಷಗಳಿಗೆ ಮನಸ್ಸು ಕೊಡಬೇಡ. ಅವರು ಮಾಡುವುದು ಒಳ್ಳೆಯದೋ ಕೆಟ್ಟುದೋ ಎಂಬ ಗೋಜಿಗೆ ಹೋಗಬೇಡ. ನಿನ್ನ ಲೋಪದೋಷಗಳನ್ನು ನೀನು ನೋಡಿಕೊ."

"ಆಡಿದ ಹಾಗೆ ಮಾಡದವನ ಮಾತು, ವಾಸನೆಯಿಲ್ಲದ ಬಣ್ಣದ ಹೂವಿನ ಹಾಗೆ, ಪ್ರಯೋಜನವಿಲ್ಲದ್ದು. ಆಡಿದ ಹಾಗೆ ಮಾಡುವವನ

ಮಾತು, ವಾಸನೆಯಿರುವ ಬಣ್ಣದ ಹೂವಿನ ಹಾಗೆ, ಪ್ರಯೋಜನವುಳ್ಳದ್ದು."

"ಸಂಕಟವನ್ನು ಉಂಟುಮಾಡುವ ಕಾರ್ಯ ಒಳ್ಳೆಯ ಕಾರ್ಯವಲ್ಲ. ಅದರ ಫಲವನ್ನು ಅಳುತ್ತ ಅನುಭವಿಸುವುದಾದರೆ, ಅದು ಒಳ್ಳೆಯ ಕಾರ್ಯವಲ್ಲ. ಸಂಕಟವನ್ನು ಉಂಟುಮಾಡದ ಕಾರ್ಯ ಒಳ್ಳೆಯ ಕಾರ್ಯ. ಅದರ ಫಲವನ್ನು ನಗುತ್ತ ಅನುಭವಿಸುವುದಾದರೆ ಅದು ಒಳ್ಳೆಯ ಕಾರ್ಯ."

"ಮಾಡಿದ ಪಾಪ ಫಲ ಬಿಡದಿರುವ ವರೆಗೆ, ಅದು ಜೇನಿನಂತೆ ಸಿಹಿಯಾಗಿರುವುದು. ಆ ಪಾಪ ಹಣ್ಣಾದಾಗ ದುಃಖ ಮೊದಲಾಗುವುದು."

"ಪಾಪಕಾರ್ಯವು, ಆಗತಾನೆ ಕರೆದ ಹಾಲಿನ ಹಾಗೆ, ಆ ಕ್ಷಣದಲ್ಲಿ ಒಡೆಯುವುದಿಲ್ಲ. ಬೂದಿ ಮುಚ್ಚಿದ ಕೆಂಡದಂತೆ ಸುಡುತ್ತ ಪಾಪಿಯನ್ನು ಹಿಂಬಾಲಿಸುವುದು."

"ಪುರುಷನು ಪಾಪ ಮಾಡಿದರೆ, ಅದನ್ನು ಪದೇ ಪದೇ ಮಾಡದಿರಲಿ. ಪಾಪ ಮಾಡುತ್ತ ಸಂತೋಷಪಡದಿರಲಿ. ಪಾಪದಿಂದ ದುಃಖ ಹುಟ್ಟುವುದು. ಪುರುಷನು ಪುಣ್ಯ ಮಾಡಿದರೆ ಅದನ್ನು ಪದೇ ಪದೇ ಮಾಡಲಿ. ಪುಣ್ಯಮಾಡುತ್ತ ಸಂತೋಷಪಡಲಿ. ಪುಣ್ಯದಿಂದ ಸುಖ ಹುಟ್ಟುವುದು."

"ಒಬ್ಬನನ್ನು ಅನ್ಯಾಯವಾಗಿ ನೋಯಿಸಿದರೆ ಅದು ಪಾಪ. ಆ ಪಾಪ, ಎದುರುಗಾಳಿಗೆ ಎರಚಿದ ದೂಳಿನ ಹಾಗೆ, ಆ ಪಾಪಿಯ ಮೇಲೆಯೇ ಬಂದು ಬೀಳುವುದು."

"ಪ್ರತಿಯೊಬ್ಬನೂ ಮಾಡಬೇಕಾದುದನ್ನು ತಾನು ಮೊದಲು ಕಲಿಯಲಿ; ಆಮೇಲೆ ಇತರರಿಗೆ ಕಲಿಸಲಿ."

"ಯಾವ ರೀತಿಯ ಪಾಪವನ್ನೂ ಮಾಡದೆ ಇರುವುದು, ಯಾವಾಗಲೂ ಪುಣ್ಯವನ್ನು ಸಂಪಾದಿಸುವುದು, ಮನಸ್ಸನ್ನು ಸ್ತಿಮಿತದಲ್ಲಿ ಇಟ್ಟುಕೊಳ್ಳುವುದು—ಇದೇ ಬುದ್ಧನ ಶಾಸನ."

"ಆರೋಗ್ಯವೇ ಪರಮ ಲಾಭ. ತೃಪ್ತಿಯೇ ಪರಮ ಧನ. ವಿಶ್ವಾಸವೇ ಪರಮ ಬಂಧು. ಮನಸ್ಸಿನ ಶಾಂತಿಯೇ ಪರಮ ಸುಖ."



" ಕೋಪವನ್ನು ಶಾಂತಿಯಿಂದ ಜಯಿಸು. ಸಾಧುತ್ವದಿಂದ ಒರಟನನ್ನು ಜಯಿಸು. ದಾನದಿಂದ ಜಿಪುಣನನ್ನು ಜಯಿಸು. ಸುಳ್ಳಾಡುವವನನ್ನು ಸತ್ಯದಿಂದ ಜಯಿಸು."

"ಸತ್ಯವನ್ನು ಹೇಳು. ಕೋಪಕ್ಕೆ ಒಳಗಾಗದಿರು. ಬೇಡಿದವರಿಗೆ ಕೊಂಚವಾದರೂ ಕೈನೀಡಿ ಕೊಡು. ಈ ಮೂರನ್ನು ನಡಸಿದರೆ, ನೀನು ದೇವತೆಗಳ ಸಮೀಪಕ್ಕೆ ಹೋಗುವೆ."

"ಪ್ರಾಣಿಗಳನ್ನು ಹಿಂಸಿಸುವವನು ಪೂಜ್ಯನಲ್ಲ. ಎಲ್ಲಾ ಪ್ರಾಣಿಗಳನ್ನೂ ಪ್ರೀತಿಸಿ, ಅಹಿಂಸೆಯನ್ನು ಆಚರಿಸುವವನೇ ಪೂಜ್ಯ."

"ಇಲ್ಲದುದನ್ನು ಹೇಳುವವನೂ, ಮಾಡಿದುದನ್ನು ಮಾಡಿಲ್ಲವೆನ್ನುವವನೂ ನರಕಕ್ಕೆ ಹೋಗುವರು. ಸತ್ತಮೇಲೆ ಆ ಪಾಪಿಗಳು ಇಬ್ಬರೂ ಸಮಾನರಾಗುವರು."

"ತಾಯಿಯನ್ನು ಗೌರವಿಸುವುದೂ ತಂದೆಯನ್ನು ಗೌರವಿಸುವುದೂ ಸುಖ. ಭಿಕ್ಷುಗಳನ್ನು ಗೌರವಿಸುವುದು ಸುಖ. ಬ್ರಾಹ್ಮಣರನ್ನು ಗೌರವಿಸುವುದು ಸುಖ."

"ಕೆಟ್ಟುದನ್ನು ಯೋಚಿಸದೆ, ಆಡದೆ, ಮಾಡದೆ ಇರುವವನನ್ನೇ ನಾನು ಬ್ರಾಹ್ಮಣನೆನ್ನುವೆನು. ಜಟಿಯಿಂದ, ಗೋತ್ರದಿಂದ, ಹುಟ್ಟಿನಿಂದ ಯಾರೂ ಬ್ರಾಹ್ಮಣನಾಗನು. ಯಾವನಲ್ಲಿ ಸತ್ಯವೂ ಧರ್ಮವೂ ಇರುವುದೋ ಅವನೇ ಸುಖಿ, ಅವನೇ ಬ್ರಾಹ್ಮಣ. ದಂಡವನ್ನು ಕೆಳಗಿರಿಸಿ, ಯಾವುದನ್ನೂ ಕೊಲ್ಲದೆ, ಕೊಲ್ಲಿಸದೆ ಇರುವವನೇ ಬ್ರಾಹ್ಮಣ. ಯಾರ ಮನಸ್ಸಿಗೂ ನೋವಾಗದಂತೆ ಸತ್ಯವನ್ನು ನುಡಿಯುವವನೇ ಬ್ರಾಹ್ಮಣ."

ಇಂತಹ ಇನ್ನೂ ಎಷ್ಟೋ ಮಾತುಗಳನ್ನು ಬುದ್ಧನು ನುಡಿದಿದ್ದಾನೆ. "ಧರ್ಮಪದ" ಎಂಬ ಪುಸ್ತಕದಲ್ಲಿ ಆ ಮಾತುಗಳೆಲ್ಲ ಸಿಕ್ಕುತ್ತವೆ. ಅದನ್ನು ಓದಿ, ಅರ್ಥಮಾಡಿಕೊಂಡು, ಅದರ ಹಾಗೆ ನಡೆದವರಿಗೆ ಬಹಳ ಶ್ರೇಯಸ್ಸುಂಟು.

---

WD 202—GPB—10,000—18-5-56

